# ಕಂಚಿನ ಕನ್ನಡಿ

**ಹೊಯಿಸಳ.**

**ಸತ್ಯಶೋಧನ ಪ್ರಕಟನ ಮಂದಿರ**
**ಕೋಟೆ** :: ಬೆಂಗಳೂರು ನಗರ
೧೯೪೭

# ಅರಿಕೆ

ಭಕ್ತಿಹೀನರ ಪೂಜೆಯಿಂದ ಶಿವನ ಕಣ್ಣು ಶಿಲೆಯಾಗಿತ್ತು. ಭಕ್ತಿವಂತನು ಬಂದನು. ತನ್ನ ಕಣ್ಣೇಕಿತ್ತು ಶಿವನಿಗೆ ಇತ್ತನು. ಆಗ ಶಿವನಿಗೆ ಜಗವನ್ನು ಮತ್ತೆ ನೋಡುವ ಸುಸಮಯವೊದಗಿತು. ಕಣ್ಣುಕೊಟ್ಟ ಕಣ್ಣಪ್ಪನು ಕಂಡಂತೆ, ಬಯಲು ಆಲಯಗಳೆರಡನ್ನೂ ಶಿವನು ತನ್ನ ನವೀನ ನಯನಗಳಿಂದ, ಕಂಡುಕೊಂಡನು. ಭಕ್ತಿವಂತನಿಗೆ ದಿವ್ಯ ನಯನಗಳು ದೊರಕಿದವು. ಪೂಜೆಗೆ ತಕ್ಕ ಫಲವಾಗಿ ಹರನಂತೆ ನರನೂ ಅಮರನಾದನು.

ಸಮಾಜದೇವನಿಗೆ ಕಣ್ಣಿಲ್ಲ. ಅವನಿಗೆ ಕಣ್ಣುಕೊಡುವ ಭಾಗ್ಯವು ಸಾಹಿತಿಗೆ ಸಲ್ಲುತ್ತದೆ. ಭಕ್ತಿವಂತ ಸಾಹಿತಿಯು ತನ್ನ ರಸದೃಷ್ಟಿಯನ್ನು ಸಮಾಜಕ್ಕೆ ನೀಡಬಲ್ಲನು. ತಾನು ಕಂಡದ್ದನ್ನು ತನ್ನ ಕಲಾಕೃತಿಯಾದ ಕಂಚಿನ ಕನ್ನಡಿಯಲ್ಲಾದರೂ ಮೂಡಿಸಿ ನೋಡಿಸಬಲ್ಲನು.

ಯಾರ ಸಂಗಡ ನಾನು ಕೆಲವು ನಿಮಿಷಗಳನ್ನು ಒಲವಿನಿಂದ ಕಳೆಯಲು ಆಸೆಪಡುವೆನೋ ಅಂಥವರ ಚಿತ್ರಗಳನ್ನು ಇಲ್ಲಿ ಬಿಡಿಸಿದ್ದೇನೆ. ಇಂಥವರು ಸಮಾಜದ ಸಂಗಡ ಜೀವಂತರಾಗಿರಲೆಂದು ನನ್ನಾಸೆ.

ಬೃಹತ್ ಸಮಾಜ ಸಾಗರದಲ್ಲಿ ನಾನೊಂದು ಚಿಪ್ಪಿನ ಕಪ್ಪೆ. ನನಗಾಗಿ ಮುಳುಗೆದ್ದು ಮುತ್ತುಪಡೆಯಬೇಕಾಗಿಲ್ಲ. ನಾನಾಗಿಯೆ ನನ್ನ ಮುಕ್ತಾಫಲಗಳನ್ನು ಕನ್ನಡಿಗರಡಿಯಲ್ಲಿ ಒಪ್ಪಿಸಿದ್ದೇನೆ. ಸಮಾಜವು ನನಗಾಗಿ ಮೀಸಲಾಗಿಟ್ಟು ಒದಗಿಸುವ ನೋವು ನಲವುಗಳನ್ನು, ಹೃದಯದಲ್ಲಿ ಧರಿಸಿ, ಜೀವನ ರಸವನ್ನು ಲೇಪಿಸಿ ಮುತ್ತುಗಳನ್ನಾಗಿಸಿ ಸಮಾಜಕ್ಕೆ ಒಪ್ಪಿಸುವ ಕಾಯಕವು ನನ್ನದು.

ಜನತೆಯ ಹೃದಯ ಮಂದಿರಕ್ಕೆ ಮೊದಮೊದಲು ಒಂದೇ ದಾರಿಯಿತ್ತು. ಅದರಲ್ಲೋ ಬಲು ನೂಕುನುಗ್ಗಲು! ಈಗ ಹಾದಿಹತ್ತಾಗಿದೆ.

ಹಿಂದೆ ನಿಂತವರಿಗೂ, ಹೊಸದಾಗಿ ಹೊರಟವರಿಗೂ, ನಿತ್ಯ ಚೈತನ್ಯನ ಆಹ್ವಾನವಿದೆ. ಭಾವನಗೆ ತಕ್ಕವರ ಜೀವನಕ್ಕೆ ತಕ್ಕ ಫಲ !

ಕನ್ನಡ ಜನತೆಯು ಚಿರಂತನವಾಗಿ, ಚಿರನೂತನವಾಗಿ, ಮಹತ್ತಾಗಿ ವೃದ್ಧಿಹೊಂದಲಿ !

" ಹೂವಿನ ಹಾಸಿಗೆಯನ್ನು " ಒಲವಿನಿಂದ ಒಪ್ಪಿಸಿಕೊಂಡ, ಕನ್ನಡ ಜನತೆಗೆ " ಕಂಚಿನ ಕನ್ನಡಿಯನ್ನು "—ಒಪ್ಪಿಸಲಪ್ಪಣೆ ಬೇಡುತ್ತೇನೆ.

ಬೆಂಗಳೂರು
೩-೭-೧೯೪೭

ಹೊಯಿಸಳ

# ಮೊಗವಾಗಿಲು

ಶ್ರೀಮಾನ್ ' ಹೊಯಿಸಳ'ರು ಕನ್ನಡಿಗರಿಗೆ ಚಿರಪರಿಚಿತರು. ಅದಕ್ಕಿಂತ ಅವರ ಕತೆಗಳು ಚಿರಪರಿಚಿತ ಎಂದರೆ ಇನ್ನೂ ಸರಿ. ಅವರ ಕತೆಗಳಲ್ಲಿ ಯಾವುದೋ ಒಂದು ಮೋಹಕಶಕ್ತಿಯಿದೆ. ಅದೇ ಅವರ ಕತೆಗಳನ್ನು ಕಾಡಿ, ಬೇಡಿ, ಬರೆಸಿ ' ಕತೆಗಾರ'ನಲ್ಲಿ ಬೆಳಕುಕಾಣುವಂತೆ ಪ್ರೇರಿಸಿತು. ಈ ಪರಿಣಾಮವನ್ನು ಈ ಕತೆಗಳಲ್ಲೊಂದನ್ನು ಕೆಲ ದಿನಗಳ ಹಿಂದೆ 'ಸಾಹಿತಿಗಳ ಸಂಘ'ದಲ್ಲಿ ಓದಿದಾಗ ಅಲ್ಲಿ ನೆರೆದ ರಸಜ್ಞರೆಲ್ಲ ಅನುಭವಿಸಿದರು. ಈ ವಿಚಿತ್ರ ಪ್ರಭಾವವನ್ನು ಎಲ್ಲ ಕತೆಗಳಲ್ಲಿಯೂ, ಹೆಚ್ಚಾಗಿ "ಕಂಚಿನ ಕನ್ನಡಿ", "ಕಡೆಗೊಂದು ಮುತ್ತು" ಮತ್ತು "ಆವುತೀ ಹಳ್ಳಿ" ಈ ಕತೆಗಳಲ್ಲಿ ಕಾಣಬಹುದು.

ಒಂದು ಉತ್ತಮಕತೆ ಸನ್ನಿವೇಶರಚನೆ, ವ್ಯಕ್ತಿ ಚಿತ್ರಣ, ಭಾವನೆಗಳ ಆವಿಷ್ಕಾರ ಇವುಗಳನ್ನೇ ಅವಲಂಬಿಸಿರುತ್ತದೆ. ಶ್ರೀ 'ಹೊಯಿಸಳ'ರ ಕತೆಗಳಲ್ಲಿ ಇವೆಲ್ಲ ಇವೆ. ಅವರು ಚಿತ್ರಿಸಿರುವ ಸನ್ನಿವೇಶಗಳೆಲ್ಲ ಓದುಗನ ಹೃದಯರಂಗವಲ್ಲಿ ಮೂಡಿ ಬರುತ್ತವೆ. ಅವರು ಯಾವ ವ್ಯಕ್ತಿಯನ್ನೇ ಚಿತ್ರಿಸಲಿ ಕೆಲಕಾಲ ಸೂಕ್ಷ್ಮವಾಗಿ ನೋಡದೆ ಚಿತ್ರಣಕ್ಕೆ ಕೈ ಹಾಕುವುದಿಲ್ಲ. ಆದ್ದರಿಂದ ಅವರ ಕತೆಯ ವ್ಯಕ್ತಿಗಳು ನಮ್ಮ ನಿಮ್ಮಂತೆ ಜೀವಂತರು. ಅವರ ಕತೆಗಳಲ್ಲೆಲ್ಲ ಸಾಮಾನ್ಯವಾಗಿ ಉದಾತ್ತ ಭಾವನೆಗಳೇ ಪರಿಸ್ಫುಟವಾಗಿವೆ. ಆದ್ದರಿಂದ ಈ ಕತೆಗಳನ್ನೋದಿದಾಗ ಅವು ನಮ್ಮನ್ನು ಭವ್ಯವಾದ ಒಂದು ಲೋಕಕ್ಕೊಯ್ಯುವುವು. ಸಾಹಿತ್ಯದಿಂದ ಅಪೇಕ್ಷಿಸಬಹುದಾದ ಅವರ್ಣನೀಯ ಆನಂದ ನಮಗೆ ದೊರಕುವುದು. ಇಷ್ಟೆಲ್ಲ ಆದರೂ ಹೆಚ್ಚು ಕತೆಗಳು ಸಹಜತೆಯ ಎಲ್ಲೆಯನ್ನೂ ಮೀರಿಲ್ಲ.

ಮೊದಲು ' ಕಂಚಿನ ಕನ್ನಡಿ' 'ಕತೆಗಾರ'ದಲ್ಲಿ ಪ್ರಕಟವಾಯಿತು. ಜನ ಈ ತೆರನಾದ ಕತೆಗಳನ್ನು ಸ್ವಾಗತಿಸುತ್ತಾರೆಂದು ತೋರಿತು. 'ಆವುತಿ

ಹಳ್ಳಿ' ಪ್ರಕಟಿಸಿದೆವು. ಅನೇಕ ಓದುಗರು ಕಾಗದ ಬರೆದರು—'ಹೊಯಿಸಳರ ಈ ತೆರನಾದ ಕತೆ ಬೇಕು. ಪ್ರಕಟಿಸಿ' ಎಂದರು. ಸರಿ 'ಕಡೆಗೊಂದು ಮುತ್ತು' 'ತಂಗವೇಲು ಇಲ್ಲೈ'........ಪ್ರಕಟವಾದುವು. ಶ್ರೀಯುತರ ಕತೆಗಳನ್ನು 'ಭಾವಪೂರ್ಣಕಾವ್ಯ'ಗಳೆಂದು ಓದುತ್ತಾರೆ ರಸಿಕಜನ !

ಈ ಹಿರಿಯ ಕತೆಗಾರರ 'ಕಪ್ಪೆ ಚಿಪ್ಪಿನ' ಭಂಡಾರದಲ್ಲಿ ಇನ್ನೂ ಎಂಥೆಂಥಾ ಆಣಿ ಮುತ್ತುಗಳಿವೆಯೋ ಬಲ್ಲವರಾರು ? ನಿಮ್ಮ ಮುಂದಿರುವ ಈ ಮುತ್ತಿನ ಮಾಲೆ ನಿಮಗೆ ಮೆಚ್ಚಲ್ಲವೇ ? ಇಂಥಾ ಹತ್ತಾರುಮಾಲೆಗಳು ಸರಸ್ವತಿದೇವಿಯ ಕಂಠಾಭರಣಗಳಾಗಿ ಕಂಗೊಳಿಸಲೆಂದು ನಾನೂ ನಿಮ್ಮೊಡನೆ ದನಿಗೂಡಿಸುತ್ತೇನೆ.

ಜೂನ್ ೨೮, ೧೯೪೭ — ಜಿ. ಎ. ನರಸಿಂಹಮೂರ್ತಿ
ಸಂಪಾದಕ : ಕತೆಗಾರ.

"ಹುರುಪಿನ ಹರೆಯರ ಹೆಮ್ಮೆಯ ಹೊಂಗನಸೆನಿಸಿರುವ 'ಶ್ರೀ ಜಿ. ಎ. ನ.' ಅವರಿಗೆ ಹೊಯಿಸಳನ ಹಲವು ಬಗೆಯಾದ ಅಭಿನಂದನೆಗಳು."

೩-೭-೧೯೪೭ — ಹೊಯಿಸಳ

## ಕಾಣಿಕೆ

ನನ್ನ ಪ್ರಥಮ ವಿಮರ್ಶಕರಾದ

**ಶ್ರೀ. ವಿ. ಸೀ.**

ಯವರಿಗೆ

ನಿತ್ಯರಸಿಕರಾದ ಕತೆಗಾರರು

ಆರಿಸಿದ

**ಈ ಕಥಾಫಲಗಳು**

೩-೭-೧೯೪೭ **ಹೊಯಿಸಳ**

# ಈ ಕನ್ನಡಿಯಲ್ಲಿ

# ೧. ಕಂಚಿನ ಕನ್ನಡಿ

—"ಸುತ್ತ ನಕ್ಷತ್ರ ಸಾಲು....ಸಣ್ಣ ಗೀರು ಕಾವೇರಿ....ಇತ್ತ ಮೇಘ ಮಂಡಲ....ಅತ್ತ ಪದ್ಮಲತೆ....ಚುಕ್ಕಿಗಳು....ಗೀರು ಗೋದಾವರಿ.....ಅತ್ತ ಶಂಖಲತಾ.....ಆಚೆಕಡೆ ದಿಗಂತ....ನಕ್ಷತ್ರ ಸಾಲು....ಮೇಲುಗಡೆ ಮಲ್ಲಿಗೆ ಗೊಂಚಲು....ಕೆಳಗಡೆ ಪಾರಿಜಾತ ಐದು....ಎಡಗಡೆ ಕಮಲ ಒಂದು.... ಬಲಗಡೆ ನಾಗಲಿಂಗ ಒಂದು....ನಡುವೆ ದಿವ್ಯ ಮುಖ ಮಂಡಲ ಬೆಳಗಿಸುವ ಸರೋವರ........ನೋಡಿರಿ! ಇದೇ ಕನ್ನಡಿ! ಈ ಕಂಚಿನ ಕನ್ನಡಿಗೆ ಬೆಳ್ಳಿಯ ಮೀನು....ಆ ಮೀನೇ ಕಂಚಿನ ಕನ್ನಡಿಯನ್ನು ಬಾಯಲ್ಲಿ ಕಚ್ಚಿ ಹಿಡಿದು ಗಂಧರ್ವಲೋಕದಿಂದ ತಂದಿದೆ........ಅಲ್ಲವೆ ನೋಡಿ. ಕೈಗೆ ಕೊಡಲಾರೆ. ಕಂಚಿನ ಕನ್ನಡಿ ಯಾರಿಗೆ ಬೇಡ! ಯಾರಿಗೆ ಬೇಕು! ಮೊಟ್ಟ ಮೊದಲ ಪ್ರೇಮಸಮಾಗಮಕ್ಕೆ ಇದು ಆವಶ್ಯಕ. ಯಾವ ಎರಡು ಮೋರೆಗಳು ಇದರಲ್ಲಿ ಒಟ್ಟಾಗಿ ಕಾಣುವವೋ ಅವು ಎರಡು ಇಹಲೋಕದಲ್ಲಿ ಒಂದಾಗಿದ್ದು ಪರಲೋಕದಲ್ಲಿ ಒಂದಾಗಿರುವವು. ಬನ್ನಿ ಬೇಗ ಹೇಳಿ. ಬೇಗ ಕೇಳಿ. ಯಾರ ಹೆಸರು ಬರೆಯಲಿ ಹೇಳಿರಿ! ಯಾರಿಗೆ ಬೇಕು. ಈಗಲೇ ಹೆಸರು ಕೆತ್ತಿ ಕೊಡುತ್ತೇನೆ. ಕಂಚಿನ ಕನ್ನಡಿ, ಕನ್ನಡೀ!"

ಹೀಗೆ ಕೂಗುತಿದ್ದವನು ಭದ್ರಾಚಾರ್ಯ ಸ್ವರ್ಣಕಾರ. ಅವನ ಮನೆತನಕ್ಕೆ ಬಂದುದು ಕನ್ನಡಿಯ ಕುಶಲತೆ. ಕಂಚಿನ ಕನ್ನಡಿಯನ್ನು ಅಲಂಕಾರವಾಗಿ ಎರಕ ಹೊಯಿದು, ಹೊಳಪುಕೊಟ್ಟು, ರಸಿಕ ರಮಣಿಯರನ್ನು ಕೂಡ ಮೆಚ್ಚಿಸುವಂಥವನು.

ಭದ್ರಾಚಾರ್ಯನನ್ನು ಆ ಪೇಟೆಯವರೆಲ್ಲ ಬಲ್ಲರು. ಅವನನ್ನು ಎಲ್ಲರೂ "ಭದ್ರಾ" ಎಂದು ಸಂಬೋಧಿಸುವರು. ಎಲ್ಲರ ಬಾಯಲ್ಲೂ "ಭದ್ರ ಬಂದಿದಾನೆ. ಕಂಚಿನ ಕನ್ನಡಿ ತಂದಿದ್ದಾನೆ. ನೋಡಿರಿ, ಕೊಳ್ಳಿರಿ!"—ಎಂಬ ಕೂಗೇ ಕೂಗು. ಮನೆಯ ಜಗಲಿಯಲ್ಲಿ ಮಕ್ಕಳು, ಮನೆಯ ಅಂಗಳದಲ್ಲಿ ಹೆಣ್ಣುಮಕ್ಕಳು, ಕೋಣೆಗಳಲ್ಲಿ ಯುವತಿಯರು, ಎಲ್ಲರೂ ಭದ್ರನ ಕನ್ನಡಿಗಳನ್ನು ನೋಡ ಬಯಸುವರು; ಕೊಳ್ಳ ಬಯಸುವರು. ಭದ್ರನ ಹತ್ತಿರ ಎಲ್ಲ ಬಗೆಯ ಕನ್ನಡಿಗಳೂ ಉಂಟು. ಕೆತ್ತನೆಯವು, ಅಲಂಕಾರದ ಎರಕದವು, ಸಾದಾ ಕನ್ನಡಿಗಳು, ಯಾವ ಬೆಲೆಗಾದರೂ ಸರಿ, ಕಂಚಿನ ಕನ್ನಡಿಗಳಿವೆ. ಭದ್ರಾಚಾರ್ಯ ಸ್ವರ್ಣಕಾರಿ, ಎಲ್ಲ ನಾಡುಗಳನ್ನೂ ಸುತ್ತಿದವನು. ಕನ್ಯಾಕುಮಾರಿಯಿಂದ ಕಾಶ್ಮೀರದ ವರೆಗೂ ಸುತ್ತಿಬಂದವನು.

ಹೂವು ಹಣ್ಣು ಮಾರುವವರು, ಕಲ್ಲುಜಜ್ಜಿ ಕೂಲಿ ಮಾಡುವವರು, ಬೀದಿ ಗುಡಿಸುವವರು ಕೂಡ, ಒಂದೊಂದು ಕನ್ನಡಿ ಕೊಂಡುಕೊಂಡರು. ಅರ್ಧ ಘಂಟೆಯೊಳಗೆ ಎಷ್ಟೋ ವ್ಯಾಪಾರವಾಗಿ ಭದ್ರಾಚಾರ್ಯನ ಚೀಲ ತುಂಬಿಹೋಯಿತು. ಒಂದು ಘಂಟೆಯಿಂದ ಇತರ ಎಲ್ಲ ವ್ಯಾಪಾರಗಳೂ ನಿಂತಿದ್ದವು. ಗುಜುಗುಜು ಗುಂಪಲು ಪೇಟೆಯಲ್ಲೆಲ್ಲ. ಇದೇನು ಗದ್ದಲವೆಂದು ಪಾಳೇಗಾರನ ಅರಮನೆಯ ಉಪ್ಪರಿಗೆಯಲ್ಲಿನ ಕಿಟಕಿಗಳೆಲ್ಲ ತೆರೆದವು. ಐದು ಕಿಟಕಿಯಿಂದ ಐದು ಜನ ಗೆಳತಿಯರು ಇಣಿಕಿ ನೋಡಿದರು.

"ಭದ್ರಾಚಾರ್ಯ! ಬಂಗಾರ ರೂವಾರಿ ಭದ್ರಾಚಾರ್ಯ! ಕಂಚಿನ ಕನ್ನಡೀ, ಭದ್ರಾಚಾರ್ಯ! ಬಂದಿದ್ದಾನೆ ಬನ್ನಿ ಬನ್ನಿ! ನೋಡೋಣ ಬನ್ನಿ!" ಹೀಗೆಂದು ಅರಸಿಯ ಗೆಳತಿಯರೆಲ್ಲ ಬಂದು ಉಪ್ಪರಿಗೆಯಲ್ಲಿ ನಿಂತರು. ಎಲ್ಲ ಗೆಳೆತಿಯರೂ ಒಂದೊಂದು ಕನ್ನಡಿ ಕೊಂಡರು.

"ಭದ್ರಾಚಾರ್ರೇ! ಅದರಲ್ಲೇನಿದೆ ತೋರಿಸಿರಿ! ಏನಿದೆ ನೋಡೋಣ. ಖಂಡಿತ ತೆಗೆಯಿರಿ! ಹಾ! ಎಷ್ಟು ಚೆನ್ನಾಗಿದೆ. ಭಂಗಾರದ್ದೇನ್ರೀ? ಅದ್ದೋ ಕೆಂಪು, ವಜ್ರ, ಪಚ್ಚೆ, ಈ ಗಿಣಿಯ ಕೊಕ್ಕಿಗೆ ಕೆಂಪೇ ಹಾಕಿದ್ದೀರಿ. ಈ ನವಿಲಿನ ಕಣ್ಣುಗಳು, ಗರಿಗಳು, ಆಹಾ ಎಷ್ಟು ಚೆನ್ನ! ಲೇ ಚೆನ್ನೀ ಕರಿಯೇ ದೊರೆಮಗಳನ್ನ! ಓಹೋ, ಎಷ್ಟೇ ಆಗಲಿ ಕರೀದಿ, ಕೊಂಡುಕೋತಾರೆ, ಹೆದರಬೇಡ ಭದ್ರಪ್ಪ—!"

ಸಂಜೆಯ ಸೂರ್ಯನ ಚಿನ್ನದ ಕಿರಣಗಳು ಭದ್ರಾಚಾರ್ಯನ ಮುಖದ ಮೇಲೆಬಿದ್ದಿದ್ದವು. ಆತನ ಕಂಚಿನ ಕನ್ನಡಿಗಳನ್ನು ಬೇಡಿ ಬೇಡಿ ತೆಗೆತೆಗೆದು ಹಾಗೆ ಹೀಗೆ ನೋಡುವಾಗಲೆಲ್ಲ ಹೊಂಬೆಳಕು ಪ್ರತಿಫಲಿತವಾಗಿ ಗೋಡೆ ಕಿಟಕಿಗಳ ರೇಶ್ಮೆ ಪರದೆಗಳ ಮೇಲೆಲ್ಲ ಬಿದ್ದ ಬಣ್ಣಗಳೆಲ್ಲ ಆಕರ್ಷಣೀಯ ಚಿತ್ರಗಳನ್ನು ಮೂಡಿಸುತ್ತಿದ್ದುವು. ಸ್ವರ್ಣಕಾರನ ಕೌಶಲ್ಯಕ್ಕೆ ಮೆಚ್ಚಿದವರು ಆತನ ಯೌವ್ವನ ಪೂರ್ಣ ವದನವನ್ನೂ ಕಂಡು ಲಜ್ಜಿತರಾಗುವಂತಿತ್ತು. ಇದೆಲ್ಲವನ್ನು ಪರದೆ ಹಿಂದಿನಿಂದ ನೋಡುತ್ತ ನಿಂತಿದ್ದ ಯುವತಿಯೋರ್ವಳು ಗಲಿಗಲಿರನೆ ಮಂಜೀರದ ಶಬ್ದ ಮಾಡುತ್ತ ಅಲ್ಲಿಗೆ ಬಂದಳು. ನೆಯ್ದ ಗಾಳಿಯಂತಿದ್ದ ಅವಳ ಮುಖ ಪರದೆಯ ಹಿಂದೆ ಆವಳ ಮಧುರವರ್ಣದ ತುಂಬು ಮುಕವು ಕಾಣುವಂತಿತ್ತು. ಆದರೆ ಅದನ್ನು ನೋಡಿ ಯಾರೂ ಮುಗ್ಧರಾಗಲಿಲ್ಲ. ಆರಿಸಿ ಆರಿಸಿ ಬೆಲೆಬಾಳುವುದೊಂದು ದರ್ಪಣವನ್ನು ಆಕೆ ತೆಗೆದಳು. ಅದರಲ್ಲಿ ತನ್ನ ಮೋರೆ ನೋಡಿ ತಾನೇ—"ವದನ ಕೆಂಪಿನ ಚಲುವೆಯೆಂದು"—ಲಜ್ಜಿತಳಾದಳು. ಹಣ ಸುರಿದು ಕೊಂಡುಕೊಂಡಳು. ಹಿಗ್ಗಾ ಮುಗ್ಗಾ ಎಳೆದಾಟವೇನೇನೂ ಇರಲಿಲ್ಲ. ಸುಲಭವಾಗಿ ವ್ಯಾಪಾರ ನಡೆದಿತ್ತು.

ಮೆಟ್ಟಿಲು ಇಳಿದು ಹೋಗಲು ಮುನ್ನ ಭದ್ರಾಚಾರ್ಯ ಪೆಟ್ಟಿಗೆಯನ್ನು ಬಿಚ್ಚಿ ನೋಡಿಕೊಂಡನು. ಆತನ ಹೆಸರು ಬರೆದಿದ್ದ ಒಂದು ದರ್ಪಣವೇ ಮಾಯವಾಗಿತ್ತು. ಅದನ್ನು ಯಾರಿಗೂ ಕೊಡಬಾರದೆಂದು ತನ್ನ ಹೆಸರನ್ನೇ ಅಲ್ಲಿ ಕೆತ್ತಿಕೊಂಡಿದ್ದನು. ಅದರಲ್ಲಿ ಬೇಲೂರಿನ ಶಿಲ್ಪದ ಮಾದರಿಗಳಿದ್ದವು. —ನಾಲ್ಕು ಕಡೆಯೂ ಮದನ ಕೈಗೊಂಬೆಗಳಿದ್ದವು. ಹಿಂಭಾಗದಲ್ಲಿ ಶೃಂಗಾರ ಮಾಡಿಕೊಳ್ಳುವ ದರ್ಪಣಹಸ್ತ ಯುವತಿಯ ಚಿತ್ರವಿತ್ತು. ಅದರಡಿಯಲ್ಲಿ ರುವಾರಿ ಭದ್ರಾಚಾರ್ಯ ತನ್ನ ಹೆಸರನ್ನೇ ಕೆತ್ತಿಕೊಂಡಿದ್ದನು. ಕುಚೇಷ್ಟೆಯ ಹೆಣ್ಣೊಂದು ಅದನ್ನು ಬಚ್ಚಿಟ್ಟಿತ್ತು. ಅದು ಆ ಕೈ ಈ ಕೈ ದಾಟಿ ದೊರೆಮಗಳ ಕೈಗೇ ಹೋಯಿತು. ಅಂತೂ ಅದು ಎಲ್ಲೋ ಮಾಯವಾದುದನ್ನು ಅರಿತು ಭದ್ರಾಚಾರ್ಯ ಅರಮನೆ ಹೊಸಿಲು ದಾಟಿದನು.

ಇದ್ದಕ್ಕಿದ್ದಹಾಗೇ ಮೋಡ ಆವರಿಸಿ ಕತ್ತಲುಗುಡಿಸಿತು. ಬಾನು

ಅರಮನೆಯ ಮುಂಭಾಗಕ್ಕೆ ಬಂದಾಗ ಸಿಡಿಲು ಮಿಂಚುಗಳಾಗಿ ಮಳೆ ಜೋರಾಗಿ ಅದರ ಸಂಗಡ ಆನೆಕಲ್ಲು ಟುವುಟುವುರನೆ ಬೀಳಲಾರಂಭಿಸಿತು. ಹಾಗೇ ಮೆಟ್ಟಲು ಹತ್ತಿ ಬಾಗಿಲಿನವರ ಸಂಗಡ ಮಾತಾಡುತ್ತ ನಿಂತನು.

ಊರೆಲ್ಲ ದೀಪದ ಬೆಳಕಿನಲ್ಲಿ ಬೆಳಗಿತು. ಊರ ಹೊರಗೆ ಹೋಗುವ ವರೆಲ್ಲ ದೊಂದಿ ಹಿಡಿದು ಹೋಗುವ ಸಡಗರವಿತ್ತು. ಆಗಾಗ್ಗೆ ದೀವಿಟಿಗೆ ಹಿಡಿಸಿಕೊಂಡು ಓಡಾಡುವವರ ಸಂಭ್ರಮವಿತ್ತು. ಸ್ವಲ್ಪಹೊತ್ತಿನ ನಂತರ ದೇವರ ಉತ್ಸವವೂ ಬಂತು ನೂರಾರು ದೀವಿಟಿಗೆಗಳ ಬೆಳಕು, ಉರಿ ಚಂಡಿಗಳ ರಣಶಬ್ದ, ಮಹಿಮೆ ಹೇಳುವ ಗಣಂಗಳ ಬೊಬ್ಬೆ, ಜೋಮ ಮಗವಾಡದವರ ಗುಡಗಾಟ, ಮನೆಮನೆಯಾರತಿಗಳ ಬೆಳಗಾಟಗಳು ಎಂಥ ವರನ್ನೂ ಹೊರಗೆಳೆಯುವಂತಿದ್ದವು. ಆಗ ಮುಂಬಾಗಿಲು ಓರೆಮಾಡಿ ದೊರೆ ಮಗಳು ಬಂದು ನಿಂತಳು. ಆಕೆಯ ಗೆಳತಿಯರಾರೂ ಸಂಗಡ ಇಲ್ಲದುದ ರಿಂದ ಪಾಳ್ಳೇಗಾರನ ಪತ್ನಿಯೇ ಬಂದು ನಿಂತಿದ್ದಳು. ಅಲ್ಲೇ ಬಳಿಯಲ್ಲಿ ಪಾಳ್ಳೇಗಾರನು ಬಿಜಮಾಡಿದನು. ಕಾವಲಿನವರು ದೂರಾದರು. ಭದ್ರಾ ಚಾರ್ಯನು ಅರಿಯದೆ ಅಲ್ಲೇ ನಿಂತಿದ್ದನು. ದೊರೆ ಮಗಳು ಕಾಣದೆ ಆತನ ಬಳಿಗೆ ಸರಿದು ನಿಂತಳು. ಉತ್ಸವ ಅರಮನೆ ಎದುರಿಗೆ ಬಂತು. ಕುಣಿತ ಹಾಡು, ಹೊಗಳಿಕೆ, ಮಂಗಳಾರತಿಗಳಾದವು. ಅಕಸ್ಮಾತ್ತಾಗಿ ದೊರೆ ಮಗಳು ಎಡಗಡೆಗೆ ತಿರುಗಿನೋಡಿದಳು.

ಅಲ್ಲಿ ಭದ್ರಾಚಾರ್ಯ, ರೂಪಕಾರಿ, ಕನಕ ಶಿಲ್ಪಿ ನಿಂತಿದ್ದನು. ದೇವರ ಮಂಗಳಬೆಳಕಲ್ಲಿ ಪ್ರಥಮ ಶುಭದರ್ಶನವಾಯಿತು. ನೋಡಿದಷ್ಟೂ ಮೊಗದ ಲಾವಣ್ಯವನ್ನು ನೋಡಿ ಮುಗ್ಧಳಾಗಿ ನಾಚಿ ಇತ್ತಕಡೆ ತನ್ನ ತಾಯಿಯ ಬಳಿಗೆ ಸರಿದುನಿಂತಳು. ತಂದೆಯ ಕೈಹಿಡಿದೆಳೆದು ಭದ್ರಾ ಚಾರ್ಯನನ್ನು ತೋರಿಸಿದಳು. ಪ್ರತಿಕ್ಷಣವೇ ಹೊರಜಗಲಿಯನ್ನು ಬಿಟ್ಟು ಒಳಗೆ ಓಡಿಬಿಟ್ಟಳು.

ಪಾಳ್ಳೇಗಾರನು ಕನಕಕಲಾಚಾರ್ಯನನ್ನು ಕರೆದು ಕೂರಿಸಿಕೊಂಡು ಮಾತಾಡಿದನು. ಆತನು ನೆರೆರಾಜ್ಯದ ಪಾಳ್ಳೇಗಾರನ ಅರಮನೆಯ ಆಶ್ರಯ ದಲ್ಲಿದ್ದ ರೂವಾರಿಯೆಂದರಿತನು. ರಾತ್ರಿ ಅರಮನೆಯ ಕೈಸಾಲೆಯಲ್ಲಿ ಆ ಕಲಾಚಾರ್ಯನನ್ನು ತಂಗಬೇಕೆಂದು ಕೇಳಿಕೊಂಡನು. ಯಜಮಾನನ

ವಿನಯಕ್ಕೆ ಮೆಚ್ಚಿ ಭದ್ರಾಚಾರ್ಯನು ನಿಂತುಬಿಟ್ಟನು. ನಿಂತವನಿಗೆ ಆತಿಥ್ಯ ಮಾಡಲು ದೊರೆ ಮಗಳೇ ಒಪ್ಪಿದಳು. ಸಂಗಡಿಗರು ಯಾರೂ ಸರಿಯಾದ ವರು ಇಲ್ಲದುದರಿಂದ ಆಕೆಯೇ ನಾಲ್ಕಾರು ಸಾರಿ ಓಡಿಾಡಿದಳು. ಹಾಗೇ ನೆನವು ಮಾಡಿಕೊಂಡು ಕಳವು ಮಾಡಿದ್ದ ಆತನ ಕನ್ನಡಿಯನ್ನು ಹಿಂತಿರುಗಿ ಕೊಡುವುದಾಗಿ ಮನಸ್ಸೂ ಮಾಡಿದಳು.

"ಭದ್ರಾಚಾರ್ರೇ! ನಿಮ್ಮದೇನಾದರೂ ಕಳುವಾಗಿದೆಯೇ ?"

"ಈ ಗದ್ದಲದಲ್ಲಿ, ಒಂದು ಕಂಚಿನ ದರ್ಪಣ ಮಾಯವಾಗಿದೆ. ಅದನ್ನು ಹೇಗೊದರೂ ಮಾಡಿ ನಾಳೆ ಹುಡುಕಬೇಕು. ಅಡನ್ನು ಹುಡುಕುವುದು ಬಹು ಸುಲಭ. ಅದರಲ್ಲಿ ನನ್ನ ಹೆಸರು ಕೆತ್ತಿದೆ."

"ಅದಿರಲಿ ಭದ್ರಾಚಾರ್ಯರೇ! ನೀವು ಬೆಳಗಿನಿಂದ ದಣಿದು ಬಂದಿದ್ದೀರಿ. ನಾನು ಊಟ ತಂದು ಬಡಿಸಲೆ ?"

"ಇಲ್ಲ ನಾವು ನಿಮ್ಮಲ್ಲಿ ಉಂಬುವುದಿಲ್ಲ! ಸ್ವಯಂಪಾಕ ಮಾಡಿಕೊಳ್ಳಬೇಕಾಗುತ್ತದೆ."

"ಹಾಗೇ ಮಾಡಿರಿ ಆಚಾರ್ರೆ. ನಾನು ಒಲೆ ಹತ್ತಿಸ ಬಹುದಲ್ಲ!" ಹೀಗೆಂದವಳು ಒಲೆ ಹತ್ತಿಸಿ ಪುಟ್ಟದೊಂದು ಸ್ವಯಂಪಾಕಕ್ಕೆ ಅನುವಾದಳು. ಖೀರು, ಸಾರು, ಬದನೆಕಾಯಿ ಪಲ್ಲೆಯು, ಬಾದಾವಿ ಸಾರು, ಸಣ್ಣ ಹಾಲುಬ್ಬಲು ಅಕ್ಕಿಯ ಉದುರನ್ನ, ಇಷ್ಟಕ್ಕೂ ಸಾಮಾನು ಸಿದ್ಧವಾದವು.

ಭದ್ರಾಚಾರ್ಯನು ಒದ್ದೆ ಉಟ್ಟು ಅಡುಗೆ ಮಾಡುತಿದ್ದನು. ಸಾಮಾನು ಒದಗಿಸಿದವಳು ದೊರೆ ಮಗಳು. ಆದರೆ ಅಡುಗೆಯ ನಡುನಡುವೆ ಭದ್ರಾಚಾರ್ಯ ಎದ್ದುಹೋಗುವ ಆವಶ್ಯಕತೆ ಇತ್ತು. ದೊರೆ ಮಗಳು ಹೊಸದಾಗಿ ಕೊಂಡ ಕನ್ನಡಿಗೆ ತನ್ನ ಹೆಸರು ಬರೆಸುವ ಹವಣು ಮಾಡಿದ್ದಳು. ಅದರಲ್ಲೂ ಭದ್ರಾಚಾರ್ಯನ ಹೆಸರು ಬರೆದಿದ್ದ ಕಂಚಿನ ಕನ್ನಡಿಗೇನೆ ತನ್ನ ಹೆಸರನ್ನೂ ಬರೆಸಬೇಕೆಂದು ಚೇಷ್ಟೆಹೂಡಿದ್ದಳು. ದೊರೆ ಮಗಳು ಓಡಾಡುತ್ತ ಇದ್ದು, ಮೊದಲು ಒಂದು ತೋರಿಸಿ, ಆತನು ಕೆತ್ತನೆ ಕೆಲಸ ಪ್ರಾರಂಭಿಸಿ ಅಡುಗೆ ಒಲೆ ನೋಡಲು ಹೋದಾಗೊಮ್ಮೆ ಕನ್ನಡಿ ಬದಲಾಯಿಸಿದ್ದಳು. ಭದ್ರಾಚಾರ್ಯ ಎಲ್ಲ ಹತಿಯಾರೂ ಸಿದ್ಧಮಾಡಿಕೊಂಡನು. ಇನ್ನು ಹೆಸರು ಕೇಳಿ ತಿಳಿದು ಬರೆಯ ಬೇಕಾಗಿತ್ತು.

—"ನಿಮ್ಮ ಹೆಸರೇನು ?"

—"ನನ್ನ, ಈ ನನ್ನ ಹೆಸರು ? ಕನಕಿ! ಹೌದು ಕನಕಿ!"

—"ದೊರೆ ಮಗಳ ಹೆಸರು ಕನಕಾವತಿಯೇನು ?"

—"ಇಲ್ರೀ, ಬರೀ ಕನಕಿ, ಕನಕಿ!"

—"ಸರಿ ಹಾಗಾದರೆ ಅಗಸಾಲಿಯ ಕೈಗೆ ಕನಕ ಸಿಕ್ಕಿದ ಹಾಗೇ ಆಯಿತು ! "

ದೊರೆ ಮಗಳು ನಕ್ಕು ಕೇಳಿದಳು—" ಕೊಟ್ಟ ಬಂಗಾರಕ್ಕೇನಾದರೂ ಮೋಸವುಂಟೇನು?" ನಗುವಿಗೆ ನಗು ಹೊಂದಿಸಿ ಭದ್ರಾಚಾರ್ಯ ಹೇಳಿದ —"ಇಂಥಾ ಬಂಗಾರ, ಸ್ವಲ್ಪ ಕದ್ದವರುಂಟೆ? ಕದ್ದರೆ ಪೂರಾ....!"

ದೊರೆ ಮಗಳು ಏನೇನೋ ಅರ್ಥ ಮಾಡಿಕೊಂಡಳು. ನಮ್ಮ ಕೈ ಅಡಿಗೆ ಉಣ್ಣದವರು, ನನ್ನ ಕಟ್ಟಿಕೊಂಡೇನು ಮಾಡಿಯಾರು. ಆಗಲಿ ಒಂದು ವೇಳೆ ಕರೆದರೆ ಸಂಗಡಲೇ ಹೊರಟೇ ಬಿಡಬೇಕು.....ರುವಾರಿಯ ಜತೆಗೆ. ತಂದೆ ತಾಯ ಕೋಪ ಕಳೆದ ಮೇಲೆ ಇಬ್ಬರೂ ಹಿಂತಿರುಗಿ ಬಂದರಾಯಿತು—ಎಂದುಕೊಂಡು ಸಡಗರದಿಂದ ಒಡಾಡಿದಳು. ಅಡುಗೆ ಮುಗಿಯಿತು—ಭದ್ರಾಚಾರ್ಯ ಊಟಕ್ಕೆ ಕುಳಿತು ಬಿಟ್ಟನು.

"ಢಣಾರ್, ಢಣಾರ್!" ಎಂದು ದೂರದ ಶಬ್ದ ಕೇಳಿ ಬಂತು. ದೊರೆ ಮಗಳು ಬಿಟ್ಟದ್ದು ಬಿಟ್ಟು ಓಡಿ ಹೋಗಿ, ಸ್ವಲ್ಪ ಹೊತ್ತಿನ ನಂತರ ಬಂದಳು. —ನನ್ನ ಅಕ್ಕ ಚಲುವಾಂಬೆ ಕೋಟೆ ಬಾಗಿಲು ಇಕ್ಕುವ ವೇಳೆ, ಎಂತ ಹೋಗಿ, ದೀವಿಟಿಗೆ ಸರದಿ ಮಾಡಿ, ಅರಮನೆ ಗೋಪುರ ಇಳಿದು ಬಂದೆ. ಅವಳು ಎಂಟು ಮೈಲಿ ದೂರದಲ್ಲಿ ಇದ್ದಾಳೆ ಕಂಚಿನ ದರ್ಗದಲ್ಲಿ. ಅಲ್ಲಿನ ಶಬ್ದ ಅದು. ಹೋಗಲಿ, ಎಲ್ಲೀ ಮಾತು. ನಿಧಾನವಾಗಿ ಊಟ ಮಾಡಿರಿ. ನಾನೇನಾದರೂ ಬಡಿಸಲೆ. ಸ್ವಲ್ಪ ಸಾರು ! ಖೀರು ?"

ಭದ್ರರೂವಾರಿ—ವಿಶ್ವಕರ್ಮ ಬ್ರಾಹ್ಮಣ. ಈ ಶೂದ್ರ ಕನ್ಯೆ ಮುಟ್ಟ ಬಾರದು ಆತನ ಅಡುಗೆ, ಆದುದರಿಂದೆದ್ದು ಹೋಗುವೆನೆಂದು ಹೆದರಿಸಿದನು.

ಆಗ ಕನಕ ಎಂದಳು "ಸಾರಿಗೆ........! ಇಲ್ಲ ಇಲ್ಲಾ, ಸಾರು ಉಂಡಾಯಿತೆ ? ಖೀರೂ ಉಂಡಾಯಿತೆ ? ಆಯಿತೇನು ? ಹಾಹಾಹಾಹಾ! ಸಾರಿಗೆ ಕಸ್ತೂರಿ ಒಗ್ಗರಿಣೆ ನಾನೇ ಹಾಕಿದ್ದೆ, ಖೀರಿಗೆ ಕೇಸರೀ ಪಚ್ಚೆಕರ್ಪೂರ

ಹಸುವಿನ ಹಾಲಲ್ಲಿ ಕದರಿ ನಾನೇ ಬೆರಸಿದ್ದೆ! ಚೆನ್ನಾಗಿತ್ತಲ್ಲವೇ? ಗೆದ್ದೇ ನಾ ಗೆದ್ದೇ!"

ಇಷ್ಟೆಲ್ಲ ಕೇಳಿ ತಡೆಯಲಾರದೆ ಹೋದ ಭದ್ರಾಚಾರ್ಯ ವಿಶ್ವಕರ್ಮ ಬ್ರಾಹ್ಮಣ ರೇಗಿ ಎದ್ದ. ಆಗ ಆ ಯುವತಿ ಇನ್ನೂ ನಕ್ಕುಬಿಟ್ಟಳು. ತನ್ನ ಮಡಿಲಲ್ಲಿದ್ದ ಕಂಚಿನ ಕನ್ನಡಿ ತೆಗೆದು ತೋರಿಸಿದಳು. ಅದರಲ್ಲಿ ಒಂದು ಕಡೆ "ಕನಕಿ" ಇನ್ನೊಂದು ಕಡೆ "ರುವಾರಿ ಭದ್ರಾ"—ಎಂದು ಕೆತ್ತಿತ್ತು. ಭದ್ರ ರೂವಾರಿ ತಡೆಯಲಾರದೆ ಹೋದ. ಮಾತಾಡಲಾರದಿದ್ದ. ಗೋಡೆ ಯಾಚೆಗೆ ಪಾಳ್ಳೇಗಾರನಿದ್ದ, ಆತನ ರಾಣಿ ಇದ್ದಳು, ಮತ್ತು ಆಳು ಕಾಳು ಗಳಿದ್ದರು ಗದ್ದಲ ಮಾಡುವಂತಿರಲಿಲ್ಲ. ಆತನ ಸಿಟ್ಟು ಬುಟ್ಟಿಯ ಹಾವಾ ಗಿತ್ತು. ದೊರೆ ಮಗಳು ಮತ್ತೆ ನಕ್ಕಳು. ಈ ಬಾರಿ ವಿಜಯದ ನಗು. ಹೆಣ್ಣಿನ ಮಾತು ಮತ್ತು ನಗು ಹೊರಗೆ ಇದ್ದವರಿಗೆ ಕೇಳಿಸಲಿಲ್ಲ. ಭದ್ರಾ ಚಾರ್ಯ ಸೋತ. ಆತನಿಗೆ ಈ ಪರಿಹಾಸ್ಯ ಸಹಿಸಲಿಲ್ಲ. ನೆರೆ ರಾಜ್ಯದ ದೊರೆ ಮನೆಯಲ್ಲಿ ಸಲುಗೆಯುಳ್ಳವನಾದರೂ, ಅಲ್ಲಿಯ ಹೆಂಗಳು ಈತನನ್ನು ಬಹುವಚನದಲ್ಲಿ ಸಂಬೋಧಿಸಿ ಗೌರವದಿಂದ ಕಾಣುತ್ತಿದ್ದರು. ಈ ಬಗೆಯ ಹಗುರ ವರ್ತನೆಯನ್ನು ಕಂಡಿರಲಿಲ್ಲ—ಸಹಿಸಲಿಲ್ಲ! ಅವನು ಮೌನವಾಗಿದ್ದನು!

ದೊರೆ ಮಗಳು ನಗು ನಿಲ್ಲಿಸಿದಳು. ಬೆಳ್ಳಿ ಗಿಂಡಿಯಿಂದ ನೀರು ಸುರಿದು ಗಂಗಾಳದೊಳಗೆ ಆತನ ಕೈ ತೊಳೆಸಿದಳು. ತನ್ನ ಸೆರಗಿನಿಂದ ಕೈ ಒರಸಿದಳು. ರೂವಾರಿ ಎದ್ದು ಈ ಕಡೆ ಬಂದನು. ಕೊಟ್ಟ ಕರ್ಪೂರ ವೀಳೆಯ ಸವಿದನು. ರೇಶ್ಮೆ ಜಮಖಾನದಲ್ಲಿ ಕುಳಿತು ಮೊಕಮಲ್ಲು ದಿಂಬಿಗೆ ಒರಗಿದನು.

ಕನಕಿ ತಾನು ದೊರೆ ಮಗಳು ಎಂಬುದನ್ನು ಮರೆತಳು. ಕೇವಲ ಯೌವ್ವನ ಭರಿತ ಬಂಗಾರದ ಪುತ್ಥಳಿಯಾಗಿ ವಿಶ್ವಕರ್ಮ ರುವಾರಿಗೆ ತನ್ನನ್ನು ಅರ್ಪಿಸಿಕೊಳ್ಳಲು ಏನೇನೆಲ್ಲ ಮಾಡಿದಳು. ಭದ್ರಾಚಾರ್ಯನು ಮೈ ಮರೆ ಯಲಿಲ್ಲ. ತಣ್ಣಗೆ ಕುಳಿತಿದ್ದವನು ಮೇಲೆದ್ದನು. ಗಂಟು ಹೆಗಲಿಗೇರಿಸಿದನು. ತನ್ನ ಶಾಲಿಗೆ ಕೈನೀಡಿದನು. ಹಣಮುಟ್ಟ ಕೈಕೋಲನ್ನು ತೆಗೆದು ಹಿಡಿ ದನು. ಹೊರಮುಖನಾದನು.

ದೊರೆ ಮಗಳು, ಕನಕಾವತಿಯು ಸೋತಳು. ಕಣ್ಣೀರ ಹೊಳೆಯಾದಳು. ಬಿಕ್ಕಿ ಬಿಕ್ಕಿ ಅಳುತ್ತ ಹೀಗೆಂದಳು—"ಭದ್ರಾ, ಪ್ರೇಮಭದ್ರಾ! ಇದೋ ಈ ಕನಕಿ, ನಿನ್ನ ದಾಸಿ! ಇಡೀ ಹಿಂದೂಸ್ಥಾನವನ್ನೇ ನೀನು ಬಲ್ಲೆ. ನನ್ನನ್ನು ಈ ಸೆರೆಯಿಂದ ಬಿಡಿಸಿ ಎಲ್ಲಿಗಾದರೂ ಕರೆದೊಯ್. ನಿನ್ನ ಪಾವಿತ್ರ್ಯ ಕೆಟ್ಟೀತೆಂದು ದುಃಖಿಸಬೇಡ. ಸಿಟ್ಟಾಗಬೇಡ-ನಾನು ಯಾರಾರಿಗೂ ಸೋತಿರಲಿಲ್ಲ. ನಿನ್ನ ಕುಶಲತೆಗೆ ಸೋತಿದ್ದೇನೆ. ನನ್ನ ಒಪ್ಪಿಸಿಕೋ. ನನ್ನ ತಂದೆ ಇನ್ನೊಂದು ತಿಂಗಳು, ಒಂದು ವೇಳೆ ಮುನಿದಿದ್ದರೂ ಕೂಡ, ಮುಂದಿನ ತಿಂಗಳು ನಮ್ಮಿಬ್ಬರನ್ನೂ ಕರೆಸಿಕೊಂಡು ಶಾಸ್ತ್ರ ವಿಧಿಯಲ್ಲಿ ಮದುವೆ ಮಾಡುವರು. ಈ ರಾಜ್ಯ ನಮ್ಮದಾಗುವುದು. ನನ್ನ ಅಕ್ಕನಿಗೆ ಈಗಾಗಲೆ ನಾನು ವರ್ತಮಾನ ಕೊಟ್ಟಿದ್ದೇನೆ. ಎಂಟೀ ವ್ಯಾಲಿಯ ಒಳದಾರಿಯಲ್ಲಿ ಹೋಗೋಣ. ಆಕೆಯ ಆಶ್ರಯದಲ್ಲಿ ಇರೋಣ. ಒಪ್ಪಿಕೋ ಭದ್ರ, ಪ್ರೇಮಭದ್ರಾ! ನೀನು ಭದ್ರಾಚಾರ್ಯ ವಿಶ್ವಕರ್ಮ, ಪವಿತ್ರ ಪುರುಷನೆಂಬುದನ್ನು ಈಗ ಮಾತ್ರ ಮರೆತಿರು. ನನ್ನ ತಾಯಿ ನಿಮ್ಮ ಕುಲದವಳು. ಆ ಮಹಾತಾಯಿ ಮಹಾಮಾಡಿ! ನನಗೆ ನಿಮ್ಮ ಆಚಾರ ವ್ಯವಹಾರವೆಲ್ಲ ಕಲಿಸಿರುವಳು. ನನ್ನ ಒಪ್ಪಿಕೋ. ಇನ್ನೂ ಕಂಚಾಗಿ ನಿಂತಿರುವೆಯಾ. ನೀನು ಯುವಕನಲ್ಲವೆ? ಈ ಏಕಾಂತದಲ್ಲಿಯೂ ಹೀಗೆ ಕಲ್ಲಾಗಿ ಈ ಕನಕಿಯ ಎದುರು ನಿಲ್ಲುವೆಯಾ? ಎಷ್ಟು ಹೇಳಿದರೂ ನಿನ್ನ ಹೃದಯ ಕರಗಲಿಲ್ಲವೆ? ಅಯ್ಯೋ ಅಯ್ಯೋ........" ಎನ್ನುತ್ತ ಆತನ ಕಾಲಿಗೆ ಎರಗಿದಳು, ಕಣ್ಣೀರಲ್ಲಿ ತೋಯಿಸಿದಳು. ಶೋಕಭರದಲ್ಲಿ ಹಾಗೇ ಒರಗಿದಳು.

ಮೈ ಮೇಲಿನ ಬಟ್ಟೆಬರಿಯೆಲ್ಲ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಕುಪ್ಪಸದ ನವಿಲು ತನ್ನ ಜರತಾರಿಯ ಗರಿಗಳನ್ನು ತುಂಬು ಬೆನ್ನಮೇಲೆ ಕೆದರಿತ್ತು. ಕೊರಳ ಕಟ್ಟಾಣಿ ಸರವು ಹರಿದು ಹರಡಿತ್ತು. ಶಿರಗಿನ ಸಿಂಹವು ಪಕ್ಕದಲ್ಲಿ ಹಾಸಿತ್ತು. ನಿರುಗೆಯೆಲ್ಲ ಬಿಚ್ಚಿದ ಬೀಸಣಿಗೆಯಾಗಿತ್ತು.

ಕುಶಲಮತಿ ಭದ್ರಾಚಾರ್ಯನು ಆ ಚಿತ್ರವನ್ನೆಲ್ಲ ಚೆನ್ನಾಗಿ ನೋಡಿಕೊಂಡು—ಇನ್ನೊಂದು ಕಂಚಿನ ಕನ್ನಡಿಗೆ ಎರಕ ಹೊಯ್ಯಲು ಸರಿಯಾಗಿದೆ ಎಂದುಕೊಂಡ. ತನ್ನ ಕೈಕೋಲ—ಒಳಗಿನ ಉಕ್ಕಿನ ಅಲುಗು ಸರಿಯಾಗಿ

ದೆಯೆ—ಎಂದು ಕೀಲು ಒತ್ತಿ ಎಳೆದು ನೋಡಿಕೊಂಡ. ಮನಸ್ಸು ಕಲ್ಲು ಮಾಡಿ ಹೊರಟುಬಿಟ್ಟ. ಅವನ ಹೃದಯ ಹೊಡೆದುಕೊಳ್ಳಲಿಲ್ಲ. ಅವನ ಮನಸ್ಸು ಉದ್ವೇಗಗೊಳ್ಳಲಿಲ್ಲ. ನಾಳೆ ಬೆಳಗ್ಗೆ ಹೊರಡುವವನು ಈ ನಡು ರಾತ್ರಿಯೇ ಹೊರಟುಬಿಟ್ಟನು.

ಅಲ್ಲಿನ ದೀಪ ದೊಡ್ಡದುಮಾಡಿ ಬಾಗಿಲು ತೆರೆದನು. ಅದರಾಚೆಯ ನಡುಮನೆಯ ದೀಪ ದೊಡ್ಡದುಮಾಡಿ ಇನ್ನೊಂದು ಬಾಗಿಲು ತೆರೆದನು. ಮೂರನೆ ಹಜಾರದ ಬಾಗಿಲು ತೆರೆಯಿತು. ನಾಲ್ಕನೆ ಬಾಗಿಲು ತೆರೆದು ಇಕ್ಕಿತು. ಹೊರಗೆ ಮಳೆ ಜಿನುಗುತ್ತಿತ್ತು. ಭದ್ರಾಚಾರ್ಯನ ಹೆಜ್ಜೆಯ ಜಾಡು ದಾರಿಯುದ್ದಕ್ಕೂ ಮುದ್ರಿತವಾಯಿತು.

ಇತ್ತ ಕನಕಿಯು ಎಚ್ಚೆತ್ತು ನೋಡಿದಳು. ಕಂಚಿನ ಕನ್ನಡಿಯಾತನು ಕಂಚಿನಂತೆ ಮಿಂಚಿದರೂ ಕಠಿಣ ಹೃದಯದವನೆಂದು ಅರಿತಳು. ಇನ್ನೊಮ್ಮೆ ಪ್ರಯತ್ನಮಾಡಿದರೆ ಒದಗಿ ಒಲಿದರೂ ಒಲಿದಾನೆಂದು ಕನ್ನಡಿಯನ್ನು ಮಡಿಲಲ್ಲಿ ಇಟ್ಟು ಕೊಂಡು, ಕೈಲಿ ದೊಂದಿಹಿಡಿದು ಹೊರಟಳು. ಊರು ಮುಂದಿನ ಮಂಟಪದಲ್ಲಿ ಖಂಡಿತ ನಿಂತಿರುವನೆಂದು ಭಾವಿಸಿ ಅಲ್ಲಿ ತಲುಪಿದಳು. "ಭದ್ರಾ, ಭದ್ರಾ, ಭದ್ರಾ!" ಎಂದು ಆವೇಶದಲ್ಲಿ ಕೂಗುತ್ತ ನಿಂತಳು. ನಿದ್ರಿಸುತ್ತಿದ್ದ ಆ ಊರಿಗೆ ಈ ನೊಂದವಳ ಕೂಗು ಕೇಳಲಿಲ್ಲ.

ಕನಕಾವತಿಯು ತನ್ನ ಪ್ರೇಮದ ಭದ್ರನನ್ನು ಅಲ್ಲಿ ಕಾಣಲಿಲ್ಲ. ಎಲ್ಲೆಲ್ಲಿಯೂ ಕಾಣಲಿಲ್ಲ....ಯಾವುದೋ ಜಾಡು ಹಿಡಿದು ಹೊರಟಳು. ಬೆಳಗಾಗುವ ಸಮಯಕ್ಕೆ ಒಂದು ಗುಡ್ಡದ ಬಳಿಗೆ ಬಂದಳು. ಅಲ್ಲಿ ಪ್ರಶಸ್ತವಾದ ಒಂದು ದೋಣೆಯ ಮೇಲುಗಡೆ ಆತನ ಹೆಸರನ್ನು ಕಲ್ಲಲ್ಲಿ ಕುಟ್ಟಿ ಅಕ್ಷರಗತಮಾಡಿದಳು. ತನ್ನ ಹೆಸರನ್ನೂ ಅಲ್ಲಿಯೇ ಕೆತ್ತಿದಳು. ತನ್ನ ಕಲಾಬತ್ತಿನ ಶೀರೆಯನ್ನು ಬಿಚ್ಚಿ ಆ ಬಂಡೆಗೆ ಹೊದಿಸಿದಳು. ಅದರಮೇಲೆ ತನ್ನ ಕುಪ್ಪುಸದ ನವಿಲು ಕಾಣುವಂತೆ ಬಿಚ್ಚಿ ಇಟ್ಟಳು. ಅದರ ಮೇಲೆ ಕನ್ನಡಿಗೆ ಸಾವಿರ ಬಾರಿ ಮುತ್ತುಕೊಟ್ಟು ಇಟ್ಟಳು. ಅನಂತರ ಗಂಗೆಯ ಮಡಿಲನ್ನು ಸೇರಿದಳು.

ಬೆಳಗಾಗುವ ಮುನ್ನ ಅರಮನೆಯಲ್ಲಿ ಗದ್ದಲವಾಯಿತು. ಊರಲೆಲ್ಲ ದೊಂದಿಗಳು ಓಡಾಡಿದವು. ಬಿಚ್ಚುಗತ್ತಿಯವರು ಊರ ಗಡಿಯಲ್ಲೆಲ್ಲ

ಹುಡುಕಿ ಊರೆಲ್ಲ ತಡಕಿದರು. "ಕಳ್ಳ ಭದ್ರಾಚಾರಿ" ಎಲ್ಲೂ ಇರಲಿಲ್ಲ. ಹೆಜ್ಜೆಯ ಜಾಡೆರಡನ್ನೂ ಬೆಳಗಿನ ಬಿಸಿಲಲ್ಲಿ ಹಿಂಬಾಲಿಸಿದರು. ಒರಟಾದ ದೊಡ್ಡ ಹೆಜ್ಜೆಯು ಕೋಮಲವಾದ ಸಣ್ಣ ಹೆಜ್ಜೆಯ ಜಾಡನ್ನು ಬಿಟ್ಟು ಬೇರಾಗಿತ್ತು.

ಸಂಜೆಯ ವೇಳೆಗೆ ಪಾಳೈಗಾರನು ಗುಡ್ಡದ ನೆತ್ತಿಯಲ್ಲಿನ ದೃಶ್ಯವನ್ನು ನೋಡಿ ಗೋಳಾಡಿದನು. ಹಿಂದಿನ ದಿನ ಕಂಚಿನ ಕನ್ನಡಿಯು ಕೋಲಾಹಲ ವೆದ್ದ ಸಮಯಕ್ಕೆ ಸರಿಯಾಗಿ ಯುವತಿಯ ದೇಹವು ಪಂಚಭೂತಗಳ ಋಣ ವನ್ನು ಆದಿನ ಅಗ್ನಿಮುಖವಾಗಿ ಒಪ್ಪಿಸಿತು. ರಾಣಿಯ ಶೋಕವು ಗುಡ್ಡದ ಲ್ಲೊಂದು ಕಲ್ಲುಮಂಟಪದ ರೂಪವನ್ನೇ ತಾಳಿತು. ಪಾಳೈಗಾರನು ಅಲ್ಲಿಯೇ ದೇವಿಕನ್ಯಾಕುಮಾರಿಯ ಗುಡಿಯನ್ನು ಕಟ್ಟಿಸಿದನು.

ಆರು ವರ್ಷಗಳ ನಂತರ ಅದೇ ಬಳಿಗೆ ಒಬ್ಬ ಸನ್ಯಾಸಿಯು ಬಂದು ನೆಲಸಿದನು. ಆತನ ಮುಂದಿನ ಬೆಂಕಿಯು ಯಾವಾಗಲೂ ಆರುತ್ತಿರಲಿಲ್ಲ. ದೇವಿಕನ್ಯಾಕುಮಾರಿಗೆ ವಾರ ವಾರವೂ ಆರತಿ ಉತ್ಸವಗಳಾದಾಗ ಊರವ ರೆಲ್ಲ ಸೇರುತ್ತಿದ್ದರು. ಯಾರೂ ಇಲ್ಲದ ಏಕಾಂತಸಮಯದಲ್ಲಿ, ಆರು ವರ್ಷದ ಹಿಂದೆ ಕರಗದಿದ್ದ ಸನ್ಯಾಸಿಯ ಹೃದಯವು ಆಗ ಕರಗುತ್ತಿತ್ತು. ಕಂಚಿನ ಕನ್ನಡಿಯು ಹೊರಗೆ ಬಂದು ಸನ್ಯಾಸಿಯ ಪ್ರೇಮಪೂಜೆಯನ್ನೆಲ್ಲ ಪಡೆಯುತ್ತಿತ್ತು. ಭದ್ರಾಚಾರ್ಯನು ಊರ ನೆನಪಿನಿಂದ ಅಳಿಸಿಹೋದನು.

"ಕನಕಿಯ ನೆನಪು ಅಮೃತವಾಯಿತು."

# ೨. ಕಡೆಗೊಂದು ಮುತ್ತು

" ಹಿಂದಕ್ಕೆ ಹೋಗೋ ಬೇತಾಳ ! "

" ಆಂ ಏನೆಂದೇ........! "

" ಇಲ್ಲವೊ ತಾಳೀ ಮರವೇ ದಾರಿಬಿಡು ಎಂದೆ ! "

" ಅದೇಕೆ ನಾನು ಸಂಸ್ಕೃತ ತಗೊಂಡು ಪಾಸುಮಾಡಲಿಲ್ಲವೇನೋ ........ಹೇಳೋ, ನಿಂದೇನೋ, ಕನ್ನಡದವನ ಹೆಚ್ಚುಗಾರಿಕೆ........! "

" ಸ್ವಲ್ಪ ಬಿಡೋಮ್ಮ, ನಿನ್ನ ದಮ್ಮಯ್ಯ ಬಿಡೋ ! "

" ಮೂಗು ನೆಲಕ್ಕೆ ಮುಟ್ಟಿಸು! ಹಾಗೆ ಬಾ! ಇಲ್ಲ ಇಲ್ಲ ಸ್ವಲ್ಪತಾಳು ........ಗುರುಗಳೀ ಗುರುಗಳೀ, ನಾನು ಯಾರು ಹೇಳಿ. ಸಂಸ್ಕೃತ ತಗೊಂಡಿದ್ದೆ; ಪಾಸುಮಾಡಿದ್ದೇನೆ ಗುರುಗಳೀ ! "

"ಗಿಂಡಿನೀರ ಗುಂಡಮ್ಮನ ಮಗ ಅಲ್ಲವೇನೋ ! ನಿಮ್ಮಮ್ಮ, ನೀರು ಹಾರಿಸಿಕೊಂಡು ಮಡಿನೆಲ ಆರಿಸೀ ಆರಿಸೀ ಹೆಜ್ಜೆ ಇಟ್ಟುಕೊಂಡು ಪಾಠ ಶಾಲೆಗೆ ಬಂದುಬಿಡುತ್ತಿದ್ದಳು—ಮುದ್ದು ಮಗನ್ನ ನೋಡೋಕೆ ! ಎಲ್ಲೋ ರಾಮಶಬ್ದ ಹೇಳು........"

"ಅದು ಸುಲಭ, ಗುರುಗಳೀ, ಪ್ರವರ ಹೇಳಿ ನಮಸ್ಕಾರ ಮಾಡಲೇನು? ಇಲ್ಲಿ ನೋಡಿ ಮಾಡುತ್ತೇನೆ........"

"ಅಷ್ಟು ತಿಳಿಯುಲ್ಲವೇನೋ ಏನೋ, ಏನೋ, ನನಗೆ ತಿಳಿಯುಲ್ಲವೆ ? ಆದರೆ ಇವನಾರೋ, ಚಿಗುರು ಮೀಸೆ ಬಂದಿದೆ, ಗಲ್ಲ ತೆಳ್ಳಗಾಗಿದೆ ಯಾರೋ ಈ ಗೆಣೆಯ ? ನೋಡಿದಹಾಗಿದೆ........"

"ಅವನಿರಲಿ ಗುರುಗಳೆ ಇವಳಾರು ಹೇಳಿ........"

"ಇವಳೇ ಚಂದುಟಿಯ ಚದುರೆ. ಗುಳಿಗಲ್ಲದ ಗುಂಡಿ, ಬಿನ್ನಾಣ ಗಿತ್ತೀ ಭಾಮೆ—ಏ ವೈಯ್ಯಾರೀ ! ಹೌದೋ, ಅರಿಯೇ, ಇವಳಾರೋ, ಇನ್ನೂ ಲಂಗಾ ಹಾಕಿದಾಳಲ್ಲೋ ಚದುರೆ, ಶಾಮಿಯ ಎರಡನೇ ಸಂಬಂಧದ ಮೂರನೇ ಹುಡುಗಿ ಮಾಲತೀನೇನೋ........"

"ಅಲ್ಲ ಗುರುಗಳೇ........ಲೇ ಜಾನಕೀ, ನಮಸ್ಕಾರ ಮಾಡೇ, ಹತ್ತಿರ ನಿಂತುಕೊಳ್ಳೇ, ಈಗ ನೋಡಿ ಗುರುಗಳೇ........"

"ಬಿಡೋ ನೀನೇ ಹೇಳಿಬಿಡೋ. ಆದಿರಲಿ ಅವಳು, ನಮ್ಮಾಕೆ, ಕರಿಬೇವು ತಗೊಂಬಾಂದಳು. ಹೋಗಲಿ ನೀನೇ ಕಿತ್ತುಗೊಂಬಾ. ದೊಡ್ಡ ಪಾಸು ಮಾಡಿದರೇನಂತೆ, ಕರಿಬೇವು ಕೀಳಬಾರದೇ. ಹೋಗೋ, ಹೋಗೋ........ಏ ಹುಡಿಗೀ ನೀನು ಯಾರು ಹೇಳಿಬಿಡೇ ತಾಯಿ........"

"ನಾನು ನಿಮ್ಮ ನೆರಮನೆ ಶಾರದಮ್ಮನ........"

"ಹಾ, ತಿಳೀತು ಜಾನೀ, ಪುಟ್ಟಾಣೀ ಜಾನೀ, ಹನ್ನೆರಡು ರೂಪಾಯಿನ ಪರೀಕ್ಷೆ ಪಾಸಾಯಿತೇ ಹಾಗಾದರೆ ? ಇನ್ನೇನು ಮದುವೆ ಮಾಡುತ್ತಾರೇ ! ಹೋಳಿಗೇ, ಮಂಡಿಗೆ, ಫೇಣೀ ಅವೆಲ್ಲ ತಿನ್ನಲಾರನಲ್ಲೇ ನಾನು........"

"ನಾವೇ ಎಲ್ಲಾನು ತಿಂತೀವೀ........"

"ಹೂ, ತಿಂದುಬಿಡಮ್ಮ, ತಿಂದುಬಿದು. ನಿನ್ನ ಮದುವೇಲಿ ನೀನೇ ತಿನ್ನೂವಂತೆ....... ಏನೇ, ಪುರಸತ್ತಿಲ್ಲಿರುತ್ತೀ ಸಿಂಗೆ ಹಸಿವ್ಯೆಲಿರಬೇಕು, ಹೊಗೇ ಕುಡೀಬೇಕು, ಆನೇ ಏರಬೇಕು, ಉರುಟಣೆ ಹೇಳಬೇಕು, ಗಂಡನ ಕಡೇವರ ಕೈಲಿ ಗಲ್ಲ ಗಲ್ಲ ತಿವಿಸಿಕೋಬೇಕು. ನೀನೆದ್ದು ಪಿಟ್ಟೆ ಹೊಡೀಬೇಕು........ಛೀ ಪಾಪಿ ತಿಂತಾಳಂತೆ. ನನ್ನ ಪಾಲೆಲ್ಲ ! ಹೋಗಮ್ಮ ಕರೀತಾರೆ ಹೋಗು........ಆದಾರೋ ಮತ್ತೆ ಬಂದರಲ್ಲ. ಸೂರೀ ನೋಡಪ್ಪ, ಅದ್ಯಾರೋ ಏನೋ-ನನಗೆ ನೆನಪಿಲ್ಲ. ಅವರೆಲ್ಲ-ನಾನಾರು ಗುರುಗಳೇ,

ನಾನಾರು ಗುರುಗಳೇ ಎಂತಾರೆ ನೋಡೋ. ಊರು ಬಿಟ್ಟು ಹೋಗುತಾರೆ ಏಳು ಎಂಟು ವರುಷ. ಈಗ ಬರುತಾರೆ ನಾನಾರು ಅಂತ. ಅವರ ಮಿಶಿ, ಅವರ ಕ್ರಾಪು, ಅವರ ಬಟ್ಟೇ ಬರಿ, ಎಲ್ಲಾದರ ಸಂಗಡ ಅವರ ಮಾತೂ ಬದಲಾಗಿರುತ್ತೆ. ಸೂರೀ ನೀನು ಇರು ಹತ್ತಿರ. ಅವರೇನಾದರೂ ತಂದರೆ ಇಸುಗೋ, ನೀನು ಇಂಥವರು ಎಂತ ಹೇಳು. ನಾನು ಆ ಹೆಸರು ಹಿಡಿದು ಆಶೀರ್ವಾದ ಮಾಡಿಬಿಡುತ್ತೇನೆ." ಹತ್ತಿರದಲ್ಲಿದ್ದ ಸೂರ್ಯಮೂರ್ತಿಯು ಹೀಗೆಂದನು—'ಆಗಲಪ್ಪ! ಏನೋ ಪ್ರೀತಿಯಿಂದ ಬರುತ್ತಾರಪ್ಪ ಬರಲಿ ಬಿಡು.'

ಗುರುಗಳು—"ಬರಲೋ ಬರಲಿ. ಆದರೆ ವರ್ಷಕ್ಕೊಂದು ಸಾರಿ ಊರಿಗೆ ಬಂದರೆ ಗುರುತಾದರೂ ಹಿಡಿಯಬಹುದೊ........"

ಸೂರ್ಯಮೂರ್ತಿಯ ತಾಯಿ—"ಸೂರೀ ಅಷ್ಟೊಂದೆಲ್ಲ ಯಂತ್ರಗಳ ವಿಚಾರ ಹೇಳಿದೆಯಲ್ಲೋ ನಿನ್ನೆ; ನಿಮ್ಮ ಅಪ್ಪಾವರಿಗೆ ಒಂದು ಯಂತ್ರಾನಾದರೂ ಮಾಡಿಕೊಡು. ಅದರಲ್ಲಿ ನೋಡಿದರೆ ಎಲ್ಲಾ ಗೊತ್ತಾಗುವ ಹಾಗೆ........ದೊಡ್ಡವರು ಹುಡುಗರಾಗಿ ಕಾಣುವಂಥಾ ದುರ್ಬೀನೋ ಅದೇನೋ ಮಾಡಿಕೊಡು."

ಸೂರ್ಯಮೂರ್ತಿಗೆ ಅದೂ ದಿಟವೆನ್ನಿಸಿತು. ತನ್ನ ವೃದ್ಧ ತಂದೆಗೆ ಅಂಥಾದ್ದೊಂದು ಯಂತ್ರ ಮಾಡಿಕೊಡಬೇಕೆಂದೇ ಎನ್ನಿಸಿತು. ಸಣ್ಣ ಚಿತ್ರ ದೊಡ್ಡದಾಗಿಯೂ, ದೊಡ್ಡ ಚಿತ್ರ ಸಣ್ಣದಾಗಿಯೂ ಮಾಡಬಹುದಲ್ಲ ಹಾಗೇ—ಎಂದುಕೊಂಡು ಮಲಗಿದ. ಕನಸಿನಲ್ಲಿ ಅದೆಲ್ಲ ಸಾಧ್ಯವೆನ್ನಿಸಿತು.

ಇತರ ವಿದ್ಯಾರ್ಥಿಗಳಿಗಿಂತ ಮುಂಚೆ, ರಜ ಮುಗಿವುದರೊಳಗೆ ಕಾಲೇಜಿಗೆ ಹೋದ. ಬಡವಿದ್ಯಾರ್ಥಿಗಳ ಮಂದಿರದಲ್ಲಿ ತನ್ನ ಜಾಗಕ್ಕೆ ಹೋಗಿ ಸೇರಿಕೊಂಡ. ಎಲ್ಲರೂ ಆಡುತ್ತಿರುವಾಗ ತಾನು ವಿಜ್ಞಾನ ಮಂದಿರಕ್ಕೆ ಹೋಗಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದ. ಮಾಯಾದರ್ಶಿ, ಪಾರದರ್ಶಿ, ದೂರದರ್ಶಿ, ಸೂಕ್ಷ್ಮದರ್ಶಿ, ಭಾವದರ್ಶಿ, ಜೀವದರ್ಶಿಗಳೇ ಮೊದಲಾದ ಬೇರೆ ಬೇರೆ ಯಂತ್ರಗಳನ್ನು ಮಾಡಿದ. ಅವೆಲ್ಲವನ್ನೂ ಒಟ್ಟಾಗಿ ಸೇರಿಸಿದ. ಅನಂತರ ಇನ್ನೂ ಸ್ವಲ್ಪ ಪ್ರಯೋಗಮಾಡಿ ನೋಡಿ,

ತನ್ನ ತಾಯಿಗೂ ತಂದೆಗೂ ತೋರಿಸಿ, ಇತರರ ಮುಂದೆ ಇಡಬಹುದೆಂದು ನಿರ್ಧರಮಾಡಿದ.

ಎರಡು ವರ್ಷಗಳವರೆಗೆ ವಿರಾಮಕಾಲದಲ್ಲಿಯೂ ಕೆಲಸಮಾಡಿದನು. ಅದಕ್ಕಾಗಿ ಬೇಕಾದ ಸಾಮಾನು ಕೊಳ್ಳಲಾಗಿ ತನ್ನ ಕಿವಿಯಲ್ಲಿದ್ದ ವಜ್ರದ ವಂಟಿಯನ್ನೇ ಒತ್ತೆಯಿಟ್ಟು ಹಣತಂದನು. ಅಂತು ಮುಗಿಯಿತು ಯಂತ್ರ. ಮುದುಕನಾದ ತನ್ನ ತಂದೆಗೆ, ಈ ಯಂತ್ರ ಸಹಾಯಮಾಡೀತೆಂದು ಭಾವಿಸಿ, ಆ ಸಾರಿ ತನ್ನ ಊರಿಗೇ ತಂದು, ತನ್ನ ತಂದೆಯ ಕಾಲಡಿ ನೈವೇದ್ಯಮಾಡಿದನು.

ಮಗನು ನೈವೇದ್ಯವಾಗಿ ಕೊಟ್ಟದ್ದನ್ನು ತಂದೆ ತೆಗೆದುಕೊಂಡು ಹೆಂಡತಿಯ ಕೈಲಿಟ್ಟನು—"ನೋಡೇ ನಿನ್ನ ಮಗ ಮಂಕಾ ಎಂತ ತಿಳಿದಿದ್ದೆಯಲ್ಲೇ. ಓದಿದ ಹೆಣ್ಣು, ವೈದೀಕನ್ನ ಮದಿವಾದೆ, ಇನ್ನೆಂಥಾ ಗೊಡ್ಡು ಮಕ್ಕಳೋ, ಏನು ಸಂಸಾರವೋ ಎಂದೆಯಲ್ಲಾ ನೋಡೇ, ಮಗನ್ನ ನೋಡಿ ಸಂತೋಷಪಡು........ಹಾಗೆ ಅನ್ನಲಿಲ್ಲ ಎಂತೀಯಾ, ಯಾರೇ ಹಾಗಾದರೆ, ಅಂದವರು ನಾಗೋಲೀ ದಿನ? ಹೋಗಲಿ ಬಿಡು, ತಗೋ ನೋಡು, ಅಲ್ಲಿ ನೋಡೇ........ನಿನ್ನ ಮಗ, ಮಹಾ ವಿಜ್ಞಾನಿ ನೋಡೇ! ಅವನು ಹೇಳಿದ ಹಾಗೆ ಮಾಡೂಂದೆ."

ತಾಯಿಗೆ ಬಹು ಸಂತೋಷ. "ಮಗು, ಸೂರಿ, ಇದರ ಹೆಸರೇನಪ್ಪ? ಜೀವಭಾವದೇಹವಿಕಾಸಯಂತ್ರ! ಹಾಗೋ, ಅದೇ ಹೆಸರೋ! ದೊಡ್ಡದಾಯಿತು ಹೆಸರು. ಬೇರೆ ಪುಟ್ಟದಾಗಿ ಹೆಸರಿಡು. ಚೆನ್ನಾಗಿರುತ್ತೆ. ಇರಲಿ ಹೇಗಪ್ಪ? ಇದೆಲ್ಲ ಕೀಲುಗಳನ್ನೆಲ್ಲ ತಿರುಗಿಸಬೇಕೇ? ನನಗೆ ಬರುಲ್ಲವಲ್ಲ, ನೀನೇ ತಿರುಗಿಸು. ಅಯ್ಯೋ ಅವರ ಕೈಗೇ ಕೊಡಪ್ಪ, ನಾನು ನೋಡಿತಾನೆ ಏನಾಗಬೇಕು."

ಆ ತಂದೆಗೆ ಬಹಳ ಆನಂದವಾಯಿತು. ಈಗ ಯಾರೇ ಬರಲಿ ಆ ಯಂತ್ರ ಮುಂದಿಟ್ಟುಕೊಂಡು ನೋಡಬಹುದಾಗಿತ್ತು—"ದೊಡ್ಡವರಾದಾಗ ಯಾರು ಹೇಗಿದ್ದರೆಂದು ನೋಡುವುದೇನೋ ಸರಿ. ಆದರೆ ನಿಮ್ಮ ತಾಯಿ ಇದ್ದಾಳಲ್ಲ ಅವಳು ಹುಡಿಗಿಯಾಗಿದ್ದಾಗ ಹೇಗಿದ್ದಳೋ ನೋಡಬೇಕಾಗಿತ್ತಲ್ಲೋ ಸೂರೀ. ಏನೇ, ಹೇಳಲೇನೇ-ನೋಡೋ ನಿಮ್ಮಮ್ಮ

ಮೊದಲನೇ ದಿನ ಮದಿವೆ ಆದಮೇಲೆ ಪಿತಾಂಬರ ಉಟ್ಟು ವಾರೇ ಬೈತಲೆ ಬಾಚಿಕೊಂಡು, ಕಣ್ಣಿಗೆ ಕಪ್ಪು ತಿದ್ದಿಕೊಂಡು, ದುಂಡುಮಲ್ಲಿಗೆ ಸರ ಕೈಲಿ ಹಿಡಿದು ಇಂಗ್ಲೀಷು ಹಾಡು ಗುನುಗುತ್ತ ಬಂದಳು. ಆಗ........ಹೇಳಲೇನೆ ಇನ್ನಾರಿಗೂ ಇಲ್ಲ ನಿನ್ನ ಮಗನಿಗೇ ಹೇಳುತ್ತಾ ಇದ್ದೇನೆಕಣೇ—ನನ್ನ ಸೇಡು ತೀರಿಸಿಕೋತೀನಿ ಕಣೇ, ನನ್ನ ಗೊಡ್ಡು ವೈದೀಕ ಅಂದೆಯಲ್ಲೇ—ಆದರೂ ಇಂಥಾ ಮಗನ್ನ ಪಡೆಕೊಂಡೆಯಲ್ಲೇ—ಕೇಳೋ ಆಗ ನಿನ್ನ ಅಮ್ಮ ಹಾರಾ ಹಿಡಿಕೊಂಡು ಬಂದಿದ್ದವಳು........ನನ್ನ ಕಂಡು, ಹಿಂತಿರುಗಿದಳೋ, ಏಕೋ ಏನೋ ಗೊತ್ತಿಲ್ಲ. ನಾನಂತೂ ಕೈಹಿಡಿದೆಳದುಕೊಂಡು, ಆ ಹಾರ ಅವಳ ಕೊರಳಿಗೇ ಹಾಕಿ ಗಲ್ಲದ ಮೇಲೇನೇ-ಹೂ, ಗಲ್ಲದಮೇಲೆ, ಒಂದೇ ಒಂದು ಮುತ್ತುಕೊಟ್ಟೆ. ಅದಕ್ಕೇನೆ, ಕೊಸರಿಕೊಂಡು ಗಲ್ಲ ವರಸಿಕೊಂಡು ಓಡಿಹೋಗಿ, ಅಳುತ್ತ ಇದ್ದುಬಿಟ್ಟಳು! ಆಮೇಲೆ ತಿಳುಕೊಂಡು ಬಿಟ್ಟಳು, ನಿನ್ನಮ್ಮ ವೈದೀಕನಾದರೇನು ಇವನೇ ನನ್ನ ಗಂಡ, ಎಂತ ತಿಳುಕೊಂಡಳು —ಆ ಹಿಂದಿನ ಹುಡುಗೀ ಮುಖ ನೋಡಬೇಕಪ್ಪ—ಹಾಗೆ ಮಾಡಿಕೊಂಡು ಬರತೀಯಾಪ್ಪ ನಿನ್ನ ಯಂತ್ರ. ನನ್ನ ಕಿವಿಯಲ್ಲಿದೆಯಲ್ಲ ಕೆಂಪಿನ ಕಡಕು ತಗೋ, ಅದನ್ನೂ ಮಾರಿಬಿಡು. ಒಂದು ಸಾರಿ ಆ ವೈಯ್ಯಾರೀ ಚಿತ್ರ ನೋಡಬೇಕು ಕಣೋ........"

ಸೂರ್ಯಮೂರ್ತಿಯು ತಾಯಿಯ ಆಗ ಹೀಗೆಂದುಬಿಟ್ಟರು-ಅವರ ಹುಡುಗಾಟಕ್ಕಷ್ಟು ಕೊಳ್ಳೀ ಹಾಕ; ಏನೂ ಮಾಡಬೇಡಪ್ಪ. ಎಲ್ಲಾ ಸಾಕು. ಏನಾದರೂ ಸಂಪಾದನೆ ಮಾರ್ಗ ನೋಡು ನೀನು. ಅವರ ಕೈಲಿ ಕೆಲಸವೇ ಸಾಗದು. ಹಗಲೂ ಮುಗಲೂ ಉಸ್ಸಪ್ಪಾ, ಎಂತಾರೆ.

ಸೂರ್ಯಮೂರ್ತಿಯ ತಂದೆ ಮುಂದುವರಿಸಿದರು—"ಇಲ್ಲ ಕಣೋ ಸೂರಿ, ನಾನು ಜೋಯಿಸನಾಗಿದ್ದೂ ಇಬ್ಬರು ಸುಬೇದಾರ್ರ ಸಂಬಳ ಇನ್ನೂ ತರುತ್ತೇನಪ್ಪ. ಇನ್ನೂ ಅಂಥಾ ನಿಶ್ಯಕ್ತಿ ಇಲ್ಲ. ನೀನು ನಿನ್ನ ಯಂತ್ರ ಪೂರ್ತಿಮಾಡು. ಪಾಪ ಅವಳಿಗೇನು ಆಸೆ ಇಲ್ಲವೇನು ಕೇಳು, ನಾನು ಪುಟ್ಟ ಗಂಡನಾಗಿದ್ದದ್ದನ್ನು ನೋಡಬೇಕೂಂತ! ಹೇಗಿದ್ದೇ ಎಂತೀ, ಸೂರಿ, ನಾನು, ಒಳ್ಳೇ........ಬೇಡವೇನೇ ಬಿಡೆ. ಬಿಡು. ಸೂರಿಯ ಯಂತ್ರದಲ್ಲೇ ನೋಡುವಿಯಂತೆ."

ಸೂರಿಗೆ ಆಗ ತನ್ನ ಯಂತ್ರ ಸರಿಪಡಿಸುವ ಯೋಚನೆ ಮಹತ್ತಾಗಿ ಹತ್ತಿತು. ಊಟ ತಿಂಡಿ ಬಿಟ್ಟು ಯೋಚಿಸಿ, ಗುರುತು ಹಚ್ಚಿಕೊಂಡನು. ಅಂಥಾ ಯಂತ್ರ ಸಾಧ್ಯವೆಂದುಕೊಂಡು ಶೋಧನಾಲಯಕ್ಕೆ ಹೊರಟು ಹೋದನು.

ಮೊದಲು ಮೊದಲು ಪ್ರಯೋಗಮಾಡಿ ನೋಡಿದಾಗ ಬಹು ಕಷ್ಟ ವಾಗಿ ತೋರಿಬಂತು. ಏಕೆಂದರೆ ಅಣುವನ್ನು ಮಹತ್ತಾಗಿಯೂ, ಮಹ ತ್ತನ್ನು ಅಣುವಾಗಿಯೂ ಕಾಣುವುದು ಕಷ್ಟ ಪ್ರಾರಂಭಕ್ಕೆ, ಭಾವನೆಗೇ ಸಿಕ್ಕದ ತತ್ವ ಅದು. ಆದರೆ ಈಗಾಗಲೇ ಕೆಲವು ಯಂತ್ರಗಳಿರುವವು- ಅವುಗಳಿಂದ ಕೋಳಿಯ ಮೊಟ್ಟೆಯು ಗಂಡುಮರಿ ಕೊಟ್ಟೀತೆ ಅಥವಾ ಹೆಣ್ಣು ಮರಿ ಕೊಟ್ಟೀತೇ ಎಂದು ತಿಳಿದು ಹೇಳಬಹುದು. ನಡೆಸುವವನು ದೂರ ದಲ್ಲಿದ್ದು ಮೋಟಾರಾಗಲೀ ವಿಮಾನವಾಗಲೀ ಇಂಥ ಕಡೆಗೇ ಹೋಗ ಬೇಕೆಂದು ಕಳಿಸಬಹುದು. ಭೂಮಿಯ ವೇಗವನ್ನೇ ಮೀರಬಹುದಾದ ವಿಮಾನಗಳನ್ನು ಮಾಡಬಹುದು. ನ್ಯಾಯಾಸ್ಥಾನಕ್ಕೆ ಬಂದವನು ಕಳ್ಳನೇ ಅಲ್ಲವೆ ಎಂದು ಹೇಳಬಲ್ಲ ಯಂತ್ರಗಳಿವೆ. ಒಂದುಕಡೆ ನಿಂತು ಸುತ್ತ ನೂರಾರು ಮೈಲಿಯಲ್ಲಿ ನಡೆಯುವುದೆಲ್ಲ ಕಾಣಬಲ್ಲವರಿದ್ದಾರೆ. ವಿಮಾನ ಗಳು ಇಷ್ಟೇ ದೂರದಲ್ಲಿ ಇಂಥಾ ಕಡೆಯಲ್ಲೇ ಹಾರಿದವು, ಅಥವಾ ಬಿದ್ದ ವೆಂದು, ಕೂತಕಡೆಯಿಂದ ಹೇಳುವವರಿದ್ದಾರೆ. ಹಾಗೇ ಇದೊಂದು ಅಸಾಧ್ಯ ಸಾಧನೆಯೇನಲ್ಲ. ಈಗಿನ ಯಂತ್ರವು ಮೊಟ್ಟೆಯನ್ನು ಕೋಳಿ ಯನ್ನಾಗಿ ಮಾಡಿ ತೋರಿಸಿದರೆ,—ಇನ್ನೊಂದು ಯಂತ್ರವು ಕೋಳಿಯು ಮರಿಯಾಗಿದ್ದಾಗಿನ ಚಿತ್ರ ಕೊಡಬೇಕು. ಅಷ್ಟೇತಾನೆ ಮುದುಕನ ಸುಕ್ಕು ಮೋರೆಯು, ಹರೆಯನ ಧೀರ ಮೊಗವಾಗಿ, ಬಾಲಕನ ಗುಂಡು ಮೋರೆ ಯಾಗಿ, ಮಗುವಿನ ಹಾಲು ಗಲ್ಲದ ಮಧುವದನವಾಗಿ ಕಂಡರೆ ಸಾಕು- ಇದನ್ನು ಸಾಧಿಸುವುದಕ್ಕಾಗಿಯೇ ಪ್ರಯತ್ನಿಸಬೇಕು. ಎಲ್ಲ ಪ್ರಯೋಗ ಗಳೂ ವಿಜ್ಞಾನಶಾಸ್ತ್ರದ ರೀತಿಯಿಂದಲೇ ಸಾಧ್ಯವೆನ್ನಿಸಿಬಿಡಬೇಕು. ಪ್ರಪಂಚದ ವೈಜ್ಞಾನಿಕರೆಲ್ಲ ಒಪ್ಪುವಂತಿರಬೇಕು....ಪ್ರಯೋಗಕ್ಕೆ ಸಾಧ್ಯ ವಿರಲೇಬೇಕು.

ದಿನ ಕಳೆಯಿತು. ತಂದೆಯ ಆಸೆಯನ್ನು ಪೂರೈಸಲು ಸಾಧ್ಯವಾಗ ಲಿಲ್ಲ. ಈ ವೇಳೆಗೆ ಮಹಾ ಮಹಾ ವಿಜ್ಞಾನ ಮಂದಿರಗಳಲ್ಲೆಲ್ಲ ಹೊಕ್ಕು

3

ನೋಡಿ ಅನೇಕ ಪ್ರಯೋಗಗಳನ್ನೂ ಮಾಡಿದ್ದನು. ಸೂರ್ಯಮೂರ್ತಿಯ ಗುಣವೂ, ಗುಣಕ್ಕೆ ತಕ್ಕ ಬುದ್ಧಿಯೂ, ಬುದ್ಧಿಗೆ ತಕ್ಕ ಚಾತುರ್ಯವೂ ಮತ್ತು ಅವೆಲ್ಲಕ್ಕೂ ಮಾಧುರ್ಯವನ್ನು ಕೊಡುವ ವಿನಯವೂ ಇದ್ದವು. ಸೂರ್ಯಮೂರ್ತಿಯು ಎಷ್ಟು ದಿನ ಹುಡುಗಾಟಿಕೆಯಲ್ಲಿದ್ದಾನು! ತಂದೆ ತಾಯಿಗಳಿಗೆ ಸಹಾಯ ಮಾಡಬೇಕು. ಸಂಪಾದಿಸಿದರೆ ತಂದೆಗೆ ಊರೆ ಗೋಲು. ಮದಿವೆಯಾದರೆ ತಾಯಿಗೆ ಸಂಗಾತಿ. ಆದರೆ ಮದಿವೆ ಆಗಲು ಮುನ್ನ ಈ ಯಂತ್ರದ ಸಾಧ್ಯಾ ಸಾಧ್ಯತೆಯನ್ನು ತನ್ನ ವೈಜ್ಞಾನಿಕ ಗುರು ವಿಗೆ ವಿವರಿಸಬೇಕಾಗಿತ್ತು—ತಂದೆಗೆ ಹಳೇ ವಿದ್ಯಾರ್ಥಿಗಳ ಪರಿಚಯ ಮಾಡಿ ಕೊಡುವುದಕ್ಕೆ ಮತ್ತು ತಾಯಿಗೆ ತಂದೆಯ ಯೌವ್ವನ ಚಿತ್ರ ಕಲ್ಪಿಸಿಕೊಡು ವುದಕ್ಕೆ-ಎಂತ ಅಲ್ಲಿ ಹೇಳಲಿಲ್ಲ. ಆವಿಷ್ಕಾರಗಳೂ ಸೃಷ್ಟಿಗಳೂ ಸ್ವಾರ್ಥಕ್ಕೆ ಅದೇ ರೀತಿ ಆರಂಭವಾದರೂ ಪ್ರಪಂಚದಲ್ಲಿ ಅವಕ್ಕೆ ಬೇರೆ ಬೆಲೆ ಬೇರೆ ಬಗೆ ಯಾಗಿ ಬರುತ್ತದೆ. ತಾಯಿಗೆ ಮಗನಾದವನು, ದೇಶಕ್ಕೆ ಮುಂದಾಳಾಗಿ, ಜಗತ್ತಿಗೆ ಪೂಜ್ಯನಾಗಬಲ್ಲನು. ಸೂರ್ಯಮೂರ್ತಿಯ ಪ್ರಯೋಗಗಳಿಂದ ನಿರ್ಮಾಣವಾಗಬಹುದಾದ ಯಂತ್ರವು ಕೇವಲ ಆತನ ತಾಯಿಗಾಗಿ ಆದರೂ, ಹೊರ ಪ್ರಪಂಚದಲ್ಲಿ ಅದಕ್ಕೆ ಬೇರೆ ಬೆಲೆ, ಬೇರೆ ಉಪಯೋಗ, ಬೇರೆ ಸ್ಥಾನ ಗಳಿದ್ದವು. ವಿಜ್ಞಾನದ ಪ್ರಪಂಚದಲ್ಲಿ ಆ ಯಂತ್ರಕ್ಕೆ ಬೆಲೆ ಇತ್ತು. ಅದನ್ನು ಅರಿತು ಸೂರ್ಯಮೂರ್ತಿಯ ವಿಜ್ಞಾನ ಗುರುವು ಹಲವು ಸೂಚನೆಗಳನ್ನು ಕೊಟ್ಟನು. ಅವುಗಳಲ್ಲಿ ಒಂದು ವಿದೇಶಯಾತ್ರೆ. ಮೊಟ್ಟ ಮೊದಲೇ ವಿಜ್ಞಾನಿಗಳ ದರ್ಶನಕ್ಕಾಗಿ ವಿದೇಶ ಯಾತ್ರೆ.

ವಿಮಾನವೊಂದರಲ್ಲಿ ಕುಳಿತು ಗುಪ್ತವಾಗಿ ತಿರುಗಲು ಸಹಾಯ ಮಾಡುವ ಧಾರ್ಮಿಕರು ದೊರೆತರು. ಕೇವಲ ಒಂದೇ ವರ್ಷದಲ್ಲಿ ತನ್ನ ಯಂತ್ರವನ್ನು ಪೂರೈಸಿದನು. ಅದನ್ನು ಹೊರಕ್ಕೆ ತರಲು ಮುನ್ನ, ತಂದೆಯ ಕಾಲಡಿ ಇಡಬೇಕೆಂದು ಆಸೆಯಾಯಿತು. ಅಥವ ಅದಕ್ಕೂ ಮಿಗಿಲಾಗಿ ಅದೇ ಕರ್ತವ್ಯವಾಗಿತ್ತು. ಜಗತ್ತಿನ ವಿಜ್ಞಾನ ಮಂಡಲವೊಂದರ ಸಹಾಯ ದಿಂದ ತಂದೆಯು ಇದ್ದಲ್ಲಿಗೆ ಹೊಸ ಬಗೆಯ ವಿಮಾನದಲ್ಲಿ ಹಾರಿಹೊರಟನು.

ವಿಮಾನವೊಂದು ಬಂದು ಊರ ಮುಂದಿನ ಮೈದಾನದಲ್ಲಿ ನಿಂತಿತು. ಅನೇಕರಿಗೆ ಆಶ್ಚರ್ಯವಾಯಿತು. ಅದರೊಳಗಿಂದ ಒಬ್ಬ ವ್ಯಕ್ತಿಯು

ಹೊರಟು ಬಂದು ಕನ್ನಡ ಮಾತಾಡಿದುದೂ ಮತ್ತು ಶ್ರೀ ಶಾಸ್ತ್ರೀ ಗುರುಗಳನ್ನು ನೋಡಬೇಕೆಂದುದೂ ಅತ್ಯಾಶ್ಚರ್ಯಕರವೇ ಆಗಿತ್ತು.

ಊರ ಮುಖಂಡರೊಬ್ಬರು ಹೀಗೆಂದರು—"ಸಾರ್, ತಾವಾರೋ ಗೊತ್ತಾಗಲಿಲ್ಲ. ಶಾಸ್ತ್ರಿಗಳು ಅಸ್ವಸ್ಥ. ಇಲ್ಲದಿದ್ದರೆ ಅವರೇ ಓಡಿ ಬರುತ್ತಿದ್ದರು. ಹಾರಿ ಬಂದವರನ್ನ ಓಡಿಯಾದರೂ ಹೋಗಿ ನೋಡೋಣವೆನ್ನುತ್ತಾರೆ, ಅವರು. ವಿಮಾನದ ಹತ್ತಿರ ಯಾರೂ ಹೋಗದಂತೆ ನೋಡಿಕೊಳ್ಳುತ್ತೇವೆ. ಹಾಗೆ ದಯಮಾಡಿಸಿ. ಅದೇ ಹಾದಿ! ಏನು ಮಾಡೋಣ, ಮುಖ್ಯ ನಮ್ಮೂರಿನ ದುರದೃಷ್ಟ–ಶ್ರೀ ಶಾಸ್ತ್ರಿಗಳ ಮಕ್ಕಳು ಕೂಡ ಇಲ್ಲಿಲ್ಲ. ಅವರು ಎಲ್ಲೋ ಪ್ರಪಂಚ ತಿರುಗುವುದಕ್ಕೆ ಹೋಗಿದ್ದಾರಂತೆ. ಅವರು ಬಹಳ ಬುದ್ಧಿವಂತರು, ನೋಡಿ. ನಮ್ಮೂರಿಗೇ ಒಂದು ಹೆಮ್ಮೆ ಆತ. ನಿಮ್ಮದೇ ನಿಲುವು. ನೀವು ಆ ಭೂತ ಕನ್ನಡಕ ತೆಗೆದರೆ ಅವರ ಹಾಗೇ ಇದ್ದೀರೋ ಏನೋ ಕಾಣೆ ಅಂತೂ ಆತ ಅವರ ತಂದೆ ತಾಯಿಗಳಿಗೆ ಅದೇನೋ ಯಂತ್ರ ತರುತ್ತೇನೆಂತ ಹೋಗಿಬಿಟ್ಟಿದ್ದಾರೆ. ಅವರ ಕಡೆಗಾಲಕ್ಕಾದರೂ ಬರುತ್ತಾರೋ ಇಲ್ಲವೊ........"

ಈ ಮಾತೆಲ್ಲ ಇದುವರೆಗೂ ಸುಮ್ಮನೆ ಕೇಳುತ್ತಿದ್ದವನೇ ಸೂರ್ಯಮೂರ್ತಿ. ಅವನು ಇನ್ನು ನಿಲ್ಲಲಾರದೆ ತನ್ನ ತಂದೆಯ ಮನೆಯ ಕಡೆಗೆ ಓಡಿಬಿಟ್ಟನು. ನೇರ ಒಳಗೆ ಹೋದನು. ವೈಮಾನಿಕ ಪ್ರೋಷಾಕನ್ನು ತೆಗೆಯದೇ ಒಳಗೆ ನುಗ್ಗಿದನು. ಯಾರೋ ವೈದ್ಯರೆಂದು ತಾಯಿ ಸುಮ್ಮನಾದಳು. ಶಾಸ್ತ್ರಿಗಳು ಕಣ್ಣು ತೆರೆದರು. ನೋಡಿ ಅರಿವಾಗದೆ ವೈದ್ಯರೇನೋ ಎಂದುಕೊಂಡರು.

"ಸೂರ್ಯಮೂರ್ತಿ ಹಣ ಕಳಿಸಿದನೆ, ವೈದ್ಯರೆ? ಒಳ್ಳೇ ಕೆಲಸ ಅಂಟಿಸಿಬಿಟ್ಟೆ ಅವನಿಗೆ ನಾನು. ತತ್ವ ಶಾಸ್ತ್ರದ ಊಹೆಗೆ ಮಾತ್ರ ಸಾಧ್ಯವಾದ ಯಂತ್ರವನ್ನೇ ಬಯಸಿಬಿಟ್ಟೆ. ಹೋಗಲಿ ಬೇಡ ಬಾರೆಂದರೆ ಬರಲಿಲ್ಲ. ವೈದ್ಯರೆ, ಬಹಳ ನಿಶ್ಶಕ್ತಿ. ಕಣ್ಣೇ ಕಾಣದು, ಕತ್ತಲಿಟ್ಟು ಬರುತ್ತಿದೆ"—ಇಷ್ಟೆಲ್ಲ ಕೇಳಿದ ಸೂರ್ಯಮೂರ್ತಿಗೆ, ಬಹು ದುಃಖ ಬಂದಿತು.

"ಅಪ್ಪಾ! ಗುರುತೇ ಆಗಲಿಲ್ಲವೇ. ಇಷ್ಟು ಹೊತ್ತೂ ನನ್ನ ಕಣ್ಣೀರು ನಿನ್ನ ಗಲ್ಲದ ಮೇಲೆ ಬಿತ್ತು. ಅದರ ಬಿಸಿಯೂ ತಗುಲಲಿಲ್ಲವೆ? ನಾನು

ಕಣಪ್ಪಾ, ತಂದಿದ್ದೇನೆ ನೋಡು ಯಂತ್ರ." ಈ ಮಾತುಗಳನ್ನು ಕೇಳಿದ ಶಾಸ್ತ್ರಿಗಳು ಎದ್ದು ಕುಳಿತುಬಿಟ್ಟರು. ಅದೆಲ್ಲಿತ್ತೋ ಆ ಶಕ್ತಿ!

"ತೆಗಿಯಪ್ಪಾ ತೆಗಿ ನಿನ್ನ ಯಂತ್ರ. ಕರಿ ಅವಳನ್ನ—ನಿತ್ಯ ನಿತ್ಯ, ರಾತ್ರಿ ಹಗಲು, ಪ್ರತಿ ನಿಮಿಷ ಪ್ರತಿ ಗಂಟೆ ಅಳುತ್ತಾ ಕೂತಿರುತ್ತಿದ್ದಳು ನಿನ್ನಮ್ಮ. ಕರೀ ಅವಳನ್ನ, ಕಡೇ ನೋಟ ನೋಡಿಬಿಡೋಣ. ಬಂಧೆ ಯೇನೆ, ಬಾ, ಕೂತುಗೊ. ಸ್ವಲ್ಪ ನಗು, ನಗದೇ ಇದ್ದರೆ ಹೇಗೇ, ನೋಡು ಈಗ ಸರಿ. ಹಿಂದಕ್ಕೆ ತಿರುಗಿಸಿ ಬಿಡು. ಲೇ ಮದಿವಣಗಿತ್ತೀ. ಹೌದೋ ಇದು ಪ್ರಸ್ತದ ಕೋಣೇಲಿದ್ದ ಹಾಗೇ ಇದೆ. ಲೇ ಮಾಯಾವೀ ಹೇಗಿದ್ದೆ ಯಲ್ಲೇ! ಸೂರೀ ಇನ್ನೂ ಸ್ವಲ್ಪ ತಿರುಗಿಸು, ಧಾರೇ ಮುಹೂರ್ತದ ಹುಡುಗೀ ನೋಡೋಣ. ಸರೀ, ಕಾಣುತ್ತೆ! ಥೇಟು ಅದೇ! ಆದರೆ ಸ್ವಲ್ಪ ನಗುವುದಕ್ಕೆ ಹೇಳೋ ನಿಮ್ಮಮ್ಮನಿಗೆ ಅವಳೊಬ್ಬಳೇ ಕಾಣುತ್ತಾಳೆ. ಅವಳ ತಾಯಿ ತಂದೆ ಯಾರೂ ಕಾಣಿಸುವುದಿಲ್ಲ. ಹೋಗಲಿ ಬಿಡು. ನಾನು ನೋಡಿ ಸಾಕಾಯ್ತು. ಇನ್ನು ಅವಳ ಕೈಗೆ ಕೊಡು, ನೋಡಲಿ! ಕೊಡೋ! ಬದುಕಿರುವಾಗಲೇ ನೋಡಲಿ! ಇನ್ನೇನು ನಾಲ್ಕು ಗಂಟೆ ಮೂರೇ ನಿಮಿಷ ಅವಧಿ. ಅಷ್ಟರಲ್ಲೇ ಎಲ್ಲಾ ಆಗಬೇಕು. ನೋಡಿಬಿಡೇ, ಬಾರೇ. ನಾನು ಹೇಗಿದ್ದೆ ನೀನೂ ನೋಡು........ಅಬ್ಬ ಎಂಥಾ ಯಂತ್ರ, ಸೂರಿ, ನೀನೇನು ಮಾಡಿದ್ದು?" ಶ್ರೀ ಶಾಸ್ತ್ರಿಗಳವರ ಪತ್ನಿ ಆ ಯಂತ್ರದಲ್ಲಿ ತನ್ನ ಪತಿಯ ನವಯೌವ್ವನ ರೂಪವನ್ನು ನೋಡಿರಬೇಕು. ಅದಕ್ಕಾಗಿಯೇ ಅವರು ಹೀಗೆಂದರೇನೋ. 'ಸೂರ್ಯ, ಮಗು, ನಿನ್ನ ಹಾಗೇ ಇವರು ಎಂದು ಕೊಂಡಿದ್ದೆ ನಾನು! ಈಗ ನೆನಪು ಬಂತು ನೋಡು! ಅಯ್ಯೋ ಎಂಥಾ ಯೌವ್ವನದ ಸ್ಫುರದ್ರೂಪವನ್ನು ನನಗೋಸುಗ ಈಡಾಡಿ ಬಿಟ್ಟರಲ್ಲ. ನನ್ನ ಹೆಮ್ಮೆಗೆ ಕಿಚ್ಚಿಡ. ಎಷ್ಟು ಗೋಳುಗುಟ್ಟಿಸಿಬಿಟ್ಟೆ. ನನ್ನ ನೆರಳು ನನ್ನ ಬೆಳಕಲ್ಲಿ, ಭೂಮಿ ಸುತ್ತ ಚಂದ್ರ ತಿರುಗಿದ ಹಾಗೆ, ಸದಾ ಪ್ರದಕ್ಷಿಣೆ ಮಾಡಿ ಬಿಟ್ಟರಲ್ಲೋ! ಅಯ್ಯೋ! ಎಂಥಾ ಯೌವ್ವನ, ಅಯ್ಯೋ ಎಂಥಾ ರೂಪ! ಇನ್ನು ಪುನಃ ಆ ಸುಖ ಜೀವನ......" ಹೀಗೆಂದು ಹೇಳುತ್ತ ಸುತ್ತಣ ಪರಿವೆ ಯಿಲ್ಲದೆ ಆ ಮಹಾಪುತ್ರನ ಮೇಲೆ ಒರಗಿಬಿಟ್ಟರು. ಯಂತ್ರವು ಅತ್ತಕಡೆ ಉರುಡಿಹೋಯಿತು.

ಆಗ ಶಾಸ್ತ್ರಿಗಳು ನಿಟ್ಟುಸಿರು ಬಿಟ್ಟು—“ಸೂರಿ, ಅವಳ ಹೆಮ್ಮೆ ಹೊರಗಿನ ಸಿಪ್ಪೆ ಮಾತ್ರ. ನನ್ನ ಬಹಳ ಹಚ್ಚಿಕೊಂಡಿದ್ದಳು. ನನ್ನಲ್ಲೇ ಪ್ರಾಣ. ಇನ್ನು ಬಿಡು ಅವಳಾಸೆ. ತಿಳಿದ ಹೆಂಗಸು, ನಿನ್ನ ತಿದ್ದಿದಳು. ನನ್ನ ಉದ್ಧಾರ ಮಾಡಿದಳು. ನನ್ನ ರೂಪ ಎಂದಳಲ್ಲವೆ? ಅವಳ ರೂಪ ನೀನು ಕಂಡಿದ್ದರೆ ಏನೆನ್ನುತ್ತಿದ್ದೆಯೋ! ಆ, ಏನೆಂದೆ, ಬೇಡವೆ, ಬಿಡು. ಈ ಯಂತ್ರತಾನೆ ಇನ್ನೇನು ತೋರಿಸೀತು........ಇರಲಿ ನಮ್ಮ ದಿನ ಕಳೆದೇ ಹೋಯಿತು. ಸೂರೀ, ಕನ್ಯಾಕುಮಾರಿಗೆ ಕರೆದುಕೊಂಡು ಹೋಗು. ಅದೇ ಅಲ್ಲವೆ, ಈ ನಮ್ಮ ಭಾರತಾಂಬೆಯ ಪಾದ. ಇಷ್ಟು ದಿನ ಆ ಮಹಾ ತಾಯಿಯ ಮಡಲಲ್ಲಿ ಆಡಿಕೊಂಡಿದ್ದೆ. ಆ ಕಾಲ ಕಳೆಯಿತು. ಆಕೆಯ ಶ್ರೀ ಪಾದಂಗಳಲ್ಲಿ ಇನ್ನು ನನ್ನ ಈ ದೇಹವನ್ನೇ ಅರ್ಪಿಸಿ ಬಿಡುತ್ತೇನೆ. ಅನಂತರ ಸಾಧ್ಯವಾದರೆ, ನಿನ್ನ ತಾಯಿಯನ್ನು ವಿಚಾರಿಸಿಕೋ. ಅಂತು ಕಡೆಗಾಲಕ್ಕೆ ಬಂದು ಬಿಟ್ಟೆಯಲ್ಲಾ. ನಿನ್ನಮ್ಮ ನಿನ್ನ ಬಹಳ ಹಚ್ಚಿಕೊಂಡಿದ್ದಳು ಸೂರಿ. ನನಗೋ ರಾಧೆಗಿಂತ, ಸೀತೆಗಿಂತ, ಶಕುಂತಳೆಗಿಂತ ಹೆಚ್ಚಾಗಿದ್ದಳು. ನಿನ್ನಲ್ಲಿ ಇಬ್ಬರೂ ಆಸೆ ಇಟ್ಟುಗೊಂಡಿದ್ದೆವು. ನಾನು ಕಣ್ಣು ಮುಚ್ಚಿಗೊಂಡರೆ, ಆಕೇದೂ ಮುಗಿದಂತೆ ಬಿಡು. ಇನ್ನೇನು.....ನೋಡು ನೋಡಪ್ಪಾ ಏಕೋ ಹೊರಳುತ್ತಾ ಇದ್ದಾಳೆ. ಆ ಯಂತ್ರ ಸರಿಯಾಗಿಡು. ಅವಳನ್ನ ನೋಡಿಕೋಪ್ಪಾ, ಸೂರಿ! ಅವಳ ಕಾಲವೂ ಇನ್ನೇನು ಏಳೆಂಟು ಗಂಟೆಯ ಮಾತೇ ಸರಿ. ಮಗು, ನಾವಿಬ್ಬರೂ ನಿನಗೆ ಬಹಳ ತೊಂದರೆ ಕೊಟ್ಟೆವೇನೋಪ್ಪಾ........”

ಸೂರ್ಯಮೂರ್ತಿಗೆ ತಡೆಯಲಾಗಲಿಲ್ಲ. ದುಃಖವು ಉಕ್ಕಿ ಬಂತು. ಎಷ್ಟು ಮಾಡಿದರೇನು. ಅವರಿಬ್ಬರನ್ನು ಬದುಕಿಸಿಕೊಳ್ಳಲಾರ. ಯಾವ ಯಂತ್ರ ನಿರ್ಮಾಣ ಶಕ್ತಿಗೂ ಒಂದು ಮಿತಿಯುಂಟು. ವಿಧಿಯನ್ನು ಮೀರುವುದು ಯಾರಿಂದಲೂ ಸಾಧ್ಯವಿಲ್ಲ.

ತಾಯಿಗೆ ಉಪಚಾರ ಮಾಡಿದ. ತಂದೆಯನ್ನು ಸಮಾಧಾನ ಪಡಿಸಿದ. ಊರವರ ಸಹಾಯದಿಂದ ಆ ಇಬ್ಬರನ್ನೂ ಎತ್ತಿಕೊಂಡು ಹೋಗಿ ತನ್ನ ವಿಮಾನದಲ್ಲಿ ಇರಿಸಿಕೊಂಡು ಊರವರ ಕಡೆಗೆ ತಿರುಗಿ ಹೀಗೆಂದನು—“ಅಪ್ಪಗಳಿರಾ, ಅಮ್ಮಗಳಿರಾ, ನಾನೇ ನಿಮ್ಮ ನೆಚ್ಚಿನ ಸೂರಪ್ಪ, ನಾನೇನು

ಮಹಾ ಕಲಿತಿಲ್ಲ. ಇಂಥ ಯಂತ್ರ ಶಕ್ತಿಗೂ ಒಂದು ತಡೆ, ಒಂದು ಗತಿಮಿತಿ ಇದೆ. ಈ ಜೀವ ಮಾನಕ್ಕೆ ಇಷ್ಟೇ ಸರಿಯೆಂತ ಕಾಣುತ್ತೆ. ಹೋಗಿಬರುತ್ತೇವೆ. ನನ್ನ ತಂದೆ ತಾಯಿಗಳಿಗೆ ಇಷ್ಟಾದರೂ ಸೇವೆ ಸಲ್ಲಿಸಿ ಬರುತ್ತೇನೆ. ಯಾರು ಏನು ಹೇಳಿದರೂ ನಂಬಬೇಡಿ. ಖಂಡಿತ ಹಿಂತಿರುಗಿ ಬಂದು ಇಲ್ಲೇ ನೆಲಸಿ ನಿಮ್ಮ ಹಳ್ಳಿಯ ಹೆಸರನ್ನು ಬಂಗಾರದಲ್ಲಿ ಬರೆಸುತ್ತೇನೆ. ನನ್ನ ತಂದೆ ತಾಯಿಗಳ ಅವಶೇಷಗಳನ್ನಾದರೂ ತಂದೇ ತರುತ್ತೇನೆ. ಇಲ್ಲಿ ಇದೇ ಜಾಗದಲ್ಲಿ ಬೃಂದಾವನ ಕಟ್ಟಿಸುತ್ತೇನೆ........ಇವರಿಬ್ಬರಿಗೂ ಬಳಲಿಕೆ ಹೆಚ್ಚಾಗುತ್ತ ಬಂತು. ಇನ್ನು ವಿಳಂಬ ಮಾಡಬಾರದು. ಹೋಗಿಬರಲೇ........ ನಮೋನಮಃ........"—ಹೀಗೆಂದು ತನ್ನ ತಾಯ್ ತಂದೆಗಳನ್ನು ವಿಮಾನದೊಳಗೆ ಸರಿಯಾಗಿ ಕೂರಿಸಿಕೊಂಡು ಏರಿಹಾರಿ ಹೊರಟುಬಿಟ್ಟನು.

ಅದು ಅತ್ತಿತ್ತ ಅಲುಗಲಿಲ್ಲ. ಮುಂದೆ ಹಿಂದೆ ಚಲಿಸಲಿಲ್ಲ. ಗಂಭೀರವಾಗಿ ಮೇಲೆದ್ದು ಹೋಗಿ, ಆವೂರಿನ ಮಹಾ ಗೋಪುರದ ಗುಡಿಯನ್ನು ಬಳಸಿಕೊಂಡು, ತೆಂಗಿನ ತೋಟಗಳ ಮೇಲೆದ್ದು, ಆ ಊರ ಹೊಳೆಯ ಹಾದಿಯಲ್ಲಿ ಹೊರಟಿತು. ಗುಡ್ಡವನ್ನು ಬಲಕ್ಕೆ ಬಿಟ್ಟುಕೊಂಡು ಹಾರುತ್ತ ಕಣ್ಮರೆಯಾಯಿತು.

ಕಂಚೀಕ್ಷೇತ್ರದ ಬಳಿಗೆ ಬಂದಾಗ ತಂದೆಗೆ ಎಚ್ಚರವಾಯಿತು. ತಾಯಿಗೆ ತಿಳಿವು ಬಂತು. ಇಬ್ಬರೂ ಹಾಗೇ ಎದ್ದು ಕುಳಿತರು. ತಂಪಿನ ಗಾಳಿ ಬೀಸಿದ ಮೇಲೆ ಅವರಿಬ್ಬರಿಗೂ ಹೊಸ ಚೇತನ ಬಂದಂತಾಯಿತು.

ತಂದೆ ಹೀಗೆಂದರು—"ಮಗು, ನಾನು ಹೇಳುವುದು ಕೇಳುತ್ತದೆಯೋ ನೋ........ಕೇಳುತ್ತೆಯೆ........ಸರಿ........ಏನೋ ಇಷ್ಟೆಲ್ಲಾ ಆಯಿತು. ಇನ್ನೊಂದು ಆಸೆಯಿದೆ ಕಣಪ್ಪ. ಎಚ್ಚರವಾಗಿರುವಾಗಲೇ ನಿನ್ನ ಅಪ್ಪಿಕೊಂಡು, ಮಗುವಾಗಿದ್ದಾಗ ಹೇಗಿದ್ದೆಯೋ ಹಾಗೊಮ್ಮೆ ನೋಡಿಬಿಟ್ಟು ನಿನ್ನ ಹಣೆ ಮೇಲೆ ಒಂದೇ ಒಂದು ಮುತ್ತುಕೊಟ್ಟು, ಪ್ರಾಣ ಬಿಡಬೇಕಪ್ಪ. ಏನಪ್ಪ ........ಆ ಯಂತ್ರ ಸಿಗುಹಾಗಿಲ್ಲವೆ........ಬೇಡ ಬಿಡು. ಹಾಗೇ ಆದರೂ ಹತ್ತಿರ ಬರುತ್ತೀಯಾ......ಬಾರೋ ಸೂರೀ......ನೋಡೋ......ಬಾರೋ ಎಂದರೆ........ಒಂದೇ ಒಂದು ಮುತ್ತು ಕಣೋ........"

ಆಗ ಸೂರ್ಯಮೂರ್ತಿಯು ನಿರ್ವಾಹವಿಲ್ಲದೆ ತಂದೆಯ ಕಡೆಗೆ ತಿರುಗಿದನು. ತಂದೆ ಸ್ವಲ್ಪ ದೂರದಲ್ಲಿದ್ದರು. ತಾಯಿ ಸಮೀಪ. ಆಗೆಂದನು. "ಅಪ್ಪಾ, ಇದೇನಪ್ಪಾ ಹೀಗೆ ಮರುಳಾಟ ಆಡುತ್ತಿ. ಇದೆಂಥಾ ಆಸೆ ಹೇಳು. ಈ ಕೀಲೆಲ್ಲ ಬಿಟ್ಟು ಆಕಡೆ ತಿರುಗುವ ಹಾಗಿಲ್ಲ. ಅಮ್ಮ ನಿನಗೆ ಹತ್ತಿರ ಇದ್ದಾಳೆ. ಅವಳಿಗೆ ನೀನು ಮುತ್ತು ಕೊಡು. ಅವಳು ನನಗೆ ಕೊಡಲಿ. ಹೊಸಕಾಡಿದರೆ ವಿಮಾನದ ತೂಕ ಕೆಡುತ್ತೆ. ನಮ್ಮೆಲ್ಲರನ್ನೂ ಇನ್ನೇನು ಇಲ್ಲಿಯವರೆಗೂ ಹೊತ್ತು ಈ ವಿಮಾನ ಬಂದಿದೆ. ಬೇಕಾದರೆ ರಾಮೇಶ್ವರದ ಬಳಿ ಇಳಿಸುತ್ತೇನೆ. ಹೂ, ಇಳಿಸಲೆ........ಬೇಡವೆ........ಬೇಗ ಹೇಳು.... ಬಿಡು. ರಾಮೇಶ್ವರ ದಾಟಿತು. ಅದೋ ಅಲ್ಲಿ ದೂರದಲ್ಲಿದೆ ಕನ್ಯಾಕುಮಾರಿ."

ಶ್ರೀ ಶಾಸ್ತ್ರಿಗಳು ಬಳಲಿದ್ದರು. ಒಂದೇ ಒಂದು ಬಾರಿ ನಕ್ಕುಬಿಡಲು ಪ್ರಯತ್ನಿಸಿದರು. ಕಡೆಗೆ ಹೇಳಿದರು—"ಅಯ್ಯೋ ಪಟಿಂಗ........ಆಂ........ ಏನೆಂದೆ........ನಿನ್ನಮ್ಮನಿಗೇ ನನ್ನ ಮುತ್ತು? ಅವಳಿಗೆ ಬೇಡವಂತೆ. ಅವಳು ಬಿನ್ನಾಣಗಿತ್ತಿ. ಹಾಗೆಲ್ಲ ಒಪ್ಪುತ್ತಾಳೆಯೆ, ಇಲ್ಲ! ಒಂದೇ ಒಂದು ಬಾರಿ ತಬ್ಬಿಕೊಂಡು ಮುತ್ತಿಟ್ಟು ಹರಸಿ ಹರುಷವಾಗಿ ಹಾರಿಹೋಗಿ ಆ ತಾಯಿ ಪಾದಾರವಿಂದ........"

ಈ ವೇಳೆಗೆ ಏನಾಯಿತೋ ಏನೋ ವಿಮಾನ ವಾಲಿಬಿಟ್ಟಿತು. ಮೂರು ಬಾರಿ ತಿರುಗಿತು, ಗಿರ್ರನೆ! ಹೊಗೆ ಸುತ್ತಿಕೊಂಡಿತು! ಕನ್ಯಾಕುಮಾರಿ ಭೂಶಿರದಾಚೆಗೆ ಸಮುದ್ರದಲ್ಲಿ ಇಳಿದುಬಿಟ್ಟಿತು. ಮುಳುಗಿ ಹೋಯಿತು! ಆ ವೇಳೆಗೆ ಆ ಸಂಜೆಯಲ್ಲಿ ಆ ಕ್ಷೇತ್ರದ ಬಳಿ ಯಾರೂ ಇರಲಿಲ್ಲ. ಏಕೆ ಆ ವಿಮಾನ ಹಾಗಾಯಿತೋ ಯಾರು ಬಲ್ಲರು? ತಂದೆಯ ಕಡೆಯಾಸೆಯನ್ನು ಸಲ್ಲಿಸುವ ಸಮಯದಲ್ಲಿ ಹಾಗಾಯಿತೋ ಏನೋ. ಯಂತ್ರದ ಬಳಲಾಗು ತಪ್ಪಿರಬೇಕು, ಸೂರ್ಯಮೂರ್ತಿಗೆ. ಕೀಲುಗಳು ಕೈತಪ್ಪಿರಬಹುದು. ವಿಮಾನದ ಸಮತೂಕ ತಪ್ಪಿರ ಬೇಕು. ಎಲ್ಲಕ್ಕೂ ಮುಂದಾಗಿ ವಿಧಿಯ ದಯೆ ತಪ್ಪಿರ ಬೇಕು. ಅಂತು ಅಲ್ಲಿಗೆ ಮುಗಿದಂತಾಯಿತೋ ಏನೋ ಆ ಪ್ರಯಾಣಿಕರ ಕಥೆ.

ಹಾಗಾದರೂ ಊರಿನವರು ಕಾದಿದ್ದಾರೆ—ಸೂರ್ಯಮೂರ್ತಿ ಎಂದು ಬರಬಹುದೋ ಏನೋ? ಆ ಯಂತ್ರವನ್ನು ತಮ್ಮೆಲ್ಲರಿಗೂ ಎಂದು ತೋರಿಸುವನೋ ಹೇಗೋ! ತಮಗೆಲ್ಲ ಅವನನ್ನು ನೋಡಿ ನಲಿಯುವ ಭಾಗ್ಯ ಎಂದು ಬಂದೀತೋ ಏನೋ—ಎಂದು ಇನ್ನೂ ಕಾದಿದ್ದಾರೆ.

# ೩. ತಂಗವೇಲು ಇಲ್ಲೈ

ಅದೇ ಊರು ಆ 'ಶಿವನೆ' ಬಂತು. ಅಲ್ಲಿ ಏನೇನೋ ತಿಂಡಿ ಕೊಂಡು ಅವರೆಲ್ಲ ತಿಂದರು. ಶಿವನೆ ಎಂದರೆ ನನಗೆ ಕಣ್ಣುಜ್ಜಿಕೊಂಡು ಮೈ ಚಿವುಟಿಕೊಂಡು ನೋಡಿ ಕೊಳ್ಳುವ ಹಾಗೆ ಆಗುತ್ತದೆ. ಏಕೆಂದರೆ ಇದೇ 'ಶಿವನೆ'ಯಲ್ಲೇ ಹಿಂದೊಮ್ಮೆ ಕುಳಿತಿದ್ದೆ. ಪದ್ಯ ಬರೆಯುತ್ತ ಕುಳಿತ ಭೂಪ, ಮೈ ಮರೆತು ಬಿಟ್ಟಿದ್ದೆ. ಬೀರೂರು ದಾಟಿ ಬಂದು ಅರ್ಧ ಮೀರಿದ ರಾತ್ರಿಯಲ್ಲಿ ಇಳಿದು ಬೆಂಗಳೂರಿಂದ ತಂದ ಒಂದು ಸೇಬಿನ ಹಣ್ಣು, ಬಾವುಟ ಬೀಸೋನಿಗೆ ಕೊಟ್ಟು ಲಾಂದ್ರಕಂಬದ ಬುಡದಲ್ಲಿ ಮಲಗಿದ್ದು, ಬೆಳಗ್ಗೆದ್ದು ಅಲ್ಲಿಯ ಪ್ರಭು ನಿಲ್ದಾಣದ ಅವರಿಗೆ ಒತ್ತು ಕುಚ್ಚಿನ ಹೂ ಕೊಟ್ಟು ಅಜ್ಜಂಪುರಕ್ಕೆ ಹೋಗಿ ಅಲ್ಲಿಂದ ಬಸ್ಸು ಮೇಲೆ ಊರು ಸೇರಿ ಫಜೀತಿ ಪಟ್ಟಿದ್ದೆ. ಅದಕ್ಕೆ ಶಿವನೆ ಎಂದರೆ ಭಯ.

ಸರಿ, ಅದೇ ಶಿವನೆ ಬಂತಲ್ಲ; ನನ್ನ ಗಾಡಿಯಲ್ಲೇ ಒಬ್ಬನು ಇದ್ದ. ಅವನು ತುಂಬ ಬಿರುದು, ಟೇಪು ಅಲಂಕಾರ ಪಡೆದವನು-ಸಿಪಾಯಿ. ಅವನಿಗೆ ದೊಡ್ಡ ಪದಕವೂ ಬಂದಿತ್ತೋ ಏನೋ. ಆಫ್ರಿಕಾದಲ್ಲಿ ಜಯಶೀಲನಾಗಿ ಜರ್ಮನ್ ಸೈನಿಕರನ್ನು ಹಿಡಿದು ತಂದವನು. ಇಟಾಲಿಯನ್ನರನ್ನು ನಡುಗಿಸಿದವನು. ಅವನು ಮಾತಾಡುತ್ತ ಇದ್ದರೆ, ಸುತ್ತ ಇದ್ದವರು ಹತ್ತಿರ ಹತ್ತಿರ ಸರಿದು ಕುಳಿತುಕೊಳ್ಳುತ್ತ ಇದ್ದರು. ಅವನ ಮುಖದಲ್ಲಿ ಇಡೀ ಯುದ್ಧವನ್ನೇ ಕಾಣುತ್ತ ಇದ್ದರು. ಎದುರ ಅಂಗೈಯಲ್ಲಿ ನೋಡಿ ಹೇಳಿದರೆ,

ಈತ ಕಿಟಕಿಯಾಚೆ ನೋಡುತ್ತ ಹೇಳುತಿದ್ದ. ನನಗೂ ಕೇಳಬೇಕೆಂದು ಆಸೆ. ಅವರೆಲ್ಲ ರಸವತ್ತಾದ ಯುದ್ಧದ ಹಲಸಿನ ಹಣ್ಣು ಹೆಚ್ಚಿ ಹಿಸಿದು ತೊಳೆ ಬಿಡಿಸಿ ಬಿಡಿಸಿ ತಿನ್ನುತ್ತ ಇದ್ದರೆ ನಾನು ಸುಮ್ಮನಿರುವುದು ಹೇಗೆ? ಅಷ್ಟೊಂದು ಮೆಡಲುಗಳಿಗೂ, ಬಣ್ಣದ ಟೇಪುಗಳಿಗೂ ಅರ್ಥವೇನು? ಮುಖದ ಮೇಲೆ ಕಲೆಯೇನು, ಕೈ ಮೇಲೆ ಗಾಯದ ಗುರುತೇನು. ಕಾಲಿಗೆ ಕಟ್ಟಿರುವ ಪಟ್ಟಿಯೇನು ನಡು ನಡುವೆ ಉಪಯೋಗಿಸುವ ಆ ಹೊಸ ಮಾತುಗಳ ಅರ್ಥವೇನು ಮತ್ತು ಇಷ್ಟೆಲ್ಲ ಅಪಾಯ ಸಂದರ್ಭಗಳಲ್ಲಿ ತಾನು ಇದ್ದರೂ ತಪ್ಪಿಸಿಕೊಂಡು ಬಂದುದು ಹೇಗೆ? ಸರ್ಕಸ್ ಸಿಂಹ ನೋಡಿದಂತೆ ಎವೆಯಿಕ್ಕದೆ ನಾನಾತನನ್ನು ನೋಡುತ್ತಿದ್ದೆ. ಒಳಗಿದ್ದವರೆಲ್ಲ ಆಶ್ಚರ್ಯಪಡುತ್ತ ನೋಡುತ್ತ ಇದ್ದರು. ಹೆಂಗುಸರೆಲ್ಲ ಆ ಕಡೆ ನೋಡದೆ ಇದ್ದರೂ, ಕಿವಿಯಾರ ಆತನ ಮಾತು ಕೇಳಿ ತಮ್ಮ ತಮ್ಮೊಳಗೆ ಗುಸು ಗುಟ್ಟುತ್ತ ಇದ್ದರು. ಒಬ್ಬನೇ ಒಬ್ಬ ಧೈರ್ಯಸ್ಥ ಎಂದರೆ ಮೀಸೆ ಮಾರ್ಕಂಡೇಯ. ಅವನೇ ಆ ಸಿಪಾಯನ್ನ ತಿವಿದು ತಿವಿದು ಮಾತಾಡಿಸುತ್ತಾ ಇದ್ದ. ಮೆಡಲುಗಳನ್ನು ಮುಟ್ಟಿ ಮುಟ್ಟಿ ನೋಡುತ್ತಿದ್ದ. ನಿಜಕ್ಕೂ ಅವನಿಗೆ ಧೈರ್ಯವೆ ಸರಿ!........ಏಕೆ ಹೇಳಿ ನೆನಪಾಗಲಿಲ್ಲವೆ? ಮಾರ್ಕಂಡೇಯ ಅಂದರೆ, ಆತ ಯಮನನ್ನೇ ಹೆದರಿಸಿ ಕಳಿಸಿಬಿಟ್ಟನಲ್ಲವೆ, ಆ ಪುರಾಣ ಪುಣ್ಯ ಕಥೆಯಾತ?........ಅದೇ ಕಾರಣ ಇಲ್ಲಿಯೂ, ಇವನು ಯಮ ಧೈರ್ಯದ ಮಾರ್ಕಂಡೇಯನೇ!

ಆದರೆ ನಾನು ಇದ್ದುದು ಬಾಗಿಲ ಆಚೆ. ಬೀರೂರಲ್ಲಿ ಒಬ್ಬ ಇಳಿದರೆ, ನನಗೆ ಬಾಗಿಲ ಬಳಿ ಹೊರಗೆ ನಿಲ್ಲುವ ಅವಕಾಶ ಕಡೂರಲ್ಲಿ ಒಬ್ಬ ಇಳಿದರೆ ಬಾಗಿಲ ಒಳಗೆ ಸ್ಥಳ ನನಗೆ. ಅಂತೂ ಇಂತೂ ಒಳಗೆ ಬಂದೇಬಿಟ್ಟೆ. ತುಮುಕೂರು ಬಳಿ ನಾನು ಹೋಗಿ ಅವನ ಕಾಲ ಬಳಿ ಕುಳಿತೆ. ಆ ವೇಳೆಗೆ ಅವನ ಮಾತಿನಿಂದ ಮತ್ತಾಗಿ ಎಲ್ಲ ಮಲಗಿದ್ದರು. ನನಗೆ ಕುತೂಹಲ ಹೆಚ್ಚಿ ನಿದ್ದೆ ಬರಲೊಲ್ಲದೇ ಇತ್ತು. ಆ ಸಿಪಾಯಾದರೋ ಎಚ್ಚರವಾಗಿದ್ದನೆ........ಇಲ್ಲ! ಅವನೂ ಮಲಗಿದ್ದ. ಅದೇ ಸಮಯವೆಂದು ಅವನ ಮುಖ ಮೈ ಲಕ್ಷಣಗಳೆಲ್ಲ ಯಾರ ಅಡ್ಡಿಯೂ ಇರದೆ ನೋಡಿಕೊಂಡು ಹಿಗ್ಗಿದೆ. ಎಲ್ಲ ಸರಿ. ಅವನನ್ನು ನೋಡಿದರೇ ಸಾಕು ನನಗೂ ಮೈ ಬೆವರು

ವಂಥ ಉಣ್ಣೆ ಬಟ್ಟೆಗಳನ್ನು ತೊಟ್ಟಿದ್ದ. ಅವನ ಬಿರುದು ಬಾವಟೆಗಳು ಥಳಥಳಿಸುತ್ತ ಇದ್ದವು ಆದರೆ ಅವನ ಮೋರೆಯಲ್ಲಿ ಅದೇನೋ ದುಃಖ ತುಂಬಿದಂತೆ ಇತ್ತು. ಅವನನ್ನು ಎಲ್ಲರೂ ಅದು ಇದು ಕೇಳಿದರು. ನನಗೆ ಅದು ಸಾಲದೆನ್ನಿಸಿತು. ಅವನ ಹೃದಯವನ್ನೇ ಬಗ್ಗಿಸಿಕೊಂಡು, ಅವನ ದುಃಖ ಕಷ್ಟಗಳ ಅನುಭವ ಸಾರವನ್ನು ನನ್ನ ಜೀವನದ ಬಟ್ಟಲಿಗೆ ಸ್ವಲ್ಪ ಸುರಿದುಕೊಳ್ಳಬೇಕೆನ್ನಿಸಿತು. ಆದರೆ ಅವನ ಹೆಸರು, ಭಾಷೆ, ದೇಶ, ನೆಂಟರಿಷ್ಟರು, ಯಾವುದು ಏನೆಂದು ಅರಿಯೆ. ಹೇಗೆ ಮಾತಾಡಿಸಲಿ?

ಯಶವಂತಪುರದ ಬಳಿಗೆ ರೈಲು ಬಂದಾಗ ಸಿಪಾಯಿ ಕೂಗಿಕೊಂಡು ಎದ್ದ. "ಕಡವುಳ್ ಕಾಪ್ಪಾಡು ಶ್ಯಿವನೆ, ನಾನ್ ಏನ್ ಶ್ಯೈವೇನ್!........"

"ರೀ! ಸಿಪಾಯ್ ಏನ್ರೀ! ಬೆಚ್ಚಿ ಬಿದ್ದಿರಿ, ಕನವರಿಸಿದಿರಿ ಏಕೆ?" ಎಂದು ಕೇಳಿದೆ. ಆತ ಎದ್ದು ಕುಳಿತ ಕೂಡಲೆ ನಾನು ಸರಿದು ಬೆಂಚಿನ ಮೇಲೆ ಸರಿಯಾಗಿ ಕುಳಿತುಕೊಂಡೆ.—"ಏನು, ಮತ್ತೆ ಯುದ್ಧಕ್ಕೇ ಹೋಗಿದ್ದಿರೋ ಹೇಗೆ? ಕನಸಲ್ಲಿ ಎಷ್ಟು ಬೇಗ ಹೋಗಿ ಬರಬಹುದು ನೋಡಿದಿರಾ. ಏನು ಆಫ್ರಿಕಾನೋ, ಫ್ರಾನ್ಸೋ, ಇಟಲಿಯೋ........" ಎಂದು ಕೇಳಿದ್ದಕ್ಕೆ ಆತ ತನ್ನ ಕತೆ ಹೇಳಿದ........

"ಎಲ್ಲಿಯೂ ಹೋಗಿರಲಿಲ್ಲ ಶಾಮಿ. ಯುದ್ಧಕ್ಕೆ-ರೈಲಿಗಿಂತ ಮುಂತೆ ಬೆಂಗಳೂರಿಕ್ಕೆ ಹೋಗಿತ್ತೆ. ನನಕ್ಕೂ ಮುಂಚೆ ನನ್ನ ಪುಳ್ಳೈ ಪೋಕ್ಕಿ ಅವರಮ್ಮನ್ ಮುಂತ್ಯೆ ತುಟ್ಟು ಎಣಿಸುತ್ತಂ ಇತ್ತಂ. ಅತ್ತೆಲ್ಲಂ ನೋಟ ನ್ನೋಟ್ಟೆ ಸಂತೋಷಂ ಪಟ್ಟೆ. ತಣ್ಣಗೆಗಾಳಿ ವಂದುಬಿಟ್ಟೆತ್ತು. ಎಚ್ಚರಂ ಆಯ್ಯಿತ್ತೇ........ಎನ್ನ ಮಘನ್ ಇಲ್ಲೈ ಅದಕ್ಕೇ ಪೇಶಿವಿಟ್ಟೈ, ಕಡವುಳ್, ಕಡವುಳ್ ಎನ್ನ ಕೈವಿಡಾದು........" ಹೀಗೆ ತನ್ನ ಕಥೆ ಹೇಳಿದ.

ಸಿಪಾಯಿ ಜನ್ಮ ಕುರಿಯ ಜೀವನದಂತೆ, ಕ್ಷುದ್ರದೇವತೆಗೆ ಬಲಿಕೊಡುವುದಕ್ಕಾಗಿ ಅವನನ್ನು ಸಾಕಿ ಕೊಬ್ಬಿಸುತ್ತಾರೆ. ಕಡೆಗೆ ಯುದ್ಧದ ಮಾರಿಗೆ ಬಲಿಕೊಡುತ್ತಾರೆ. ಅವನಿಗೆ ಇರುವುದು ಕಲ್ಲೆದೆಯೆಂದೇ ನನ್ನ ಭಾವನೆ- ಆದರೆ ಸಿಪಾಯಿಗೆ ಮೃದು ಹೃದಯವೂ ಇದೆ ಎಂಬುದನ್ನು ಅಂದು ಆ ರೈಲು ಗಾಡಿಯಲ್ಲಿ ಅರಿತೆ. ಕಾಕಿ ಬಣ್ಣದ ಓಟಿಯ ಒಳಗೆ ಕೋಗಿಲೆಯ ಹೃದಯವೇ ಅಡಗಿದೆ........

ಮೇಜರ್ ನಾರಾಯಣಸ್ವಾಮಿ ಊರುಬಿಟ್ಟು ಎರಡು ವರ್ಷವಾಗಿತ್ತು. ಒಮ್ಮೆ ಹೋಗಿ ಹಿಂತಿರುಗಿ ಬಂದು ಮತ್ತೊಮ್ಮೆ ಹೋಗಿದ್ದ. ಮೊದಲ ಸಾರಿ ಬರುವಾಗ ನಾಲ್ಕು ಪೆಠಾರಿ ತುಂಬ ಬಟ್ಟೆ, ನಾಲ್ಕು ಸೇರಳತೆ ರೂಪಾಯಿ ನಾಣ್ಯ, ಎರಡು ವಜ್ರದ ವಾಲೆ, ಒಂದು ವೈಢೂರ್ಯದ ಉಂಗುರ ಮೊದಲಾದೆಲ್ಲಾ ತಂದಿದ್ದ. ಇದೆಲ್ಲ ನೋಡಿ ಆತನ ಹೆಂಡತಿ ಎರಡನೆ ಬಾರಿ ಗಂಡನ ಸಂಗಡ ಹಿರಿಯ ಮಗನ್ನ ಸಿಪಾಯಾಗಿ ಕೀರ್ತಿಯ ಸಂಗಡ ಐಶ್ವರ್ಯವನ್ನೂ ತರಲೆಂದು ಕಳಿಸಿದ್ದಳು.

ಹೆಂಡತಿಯ ಬೇಡಿಕೆಯನ್ನು ಸೇನಾನಾಯಕನ ಅಪ್ಪಣೆಗಿಂತ ಹೆಚ್ಚಾಗಿ ಶಿರಸಾವಹಿಸಿ ನಡೆಸಿಕೊಂಡು ಬಂದನು. ಸಂಗಡಲೆ ರಣರಂಗಕ್ಕೆ ಕರೆ ದೊಯ್ದು ಹಿಂತಿರುಗಿದಾಗ ತಾನೆ ತನ್ನ ಸಂಗಡ ಕರೆತರುತ್ತಿದ್ದನು. ಊಟ ತಿಂಡಿಯಲ್ಲಿ ಕೊರತೆಯೇನೂ ಇರದಂತೆ ನೋಡಿಕೊಳ್ಳುತ್ತಿದ್ದನು. ಜೊತೆ ಯಲ್ಲೇ ಮಲಗಿಸಿಕೊಳ್ಳುತ್ತಿದ್ದನು. ಆ ಹುಡುಗನಾದರೋ ಬಹು ಬುದ್ಧಿ ವಂತ. ಹೆಸರಿಗೆ ತಂಗವೇಲು ಮಾತ್ರ. ಕೈ ಬರ್ಜಿಯಲ್ಲ, ಬಂದೂಕಲ್ಲ, ಉಳಿ ಗರಗಸವೇ ಅಲ್ಲ, ಸೌಟು ಕೊಟ್ಟರೂ ಸೈ ಎನ್ನಿಸಿಕೊಳ್ಳುವ ಹಾಗಿದ್ದ ಸೇವೆಯಲ್ಲಿ ನಿಪುಣ. ಕವಾತಿನಲ್ಲಿ ನಿಪುಣ, ಯುದ್ಧದಲ್ಲಿ ಬುದ್ಧಿವಂತ. ತಂದೆಯನ್ನು ಎಲ್ಲದರಲ್ಲೂ ಮೀರಿಸಿಬಿಟ್ಟ.

ಮೊದಲು ಸಣ್ಣ ಪುಟ್ಟ ಕೆಲಸ ಕಲಿತನು. ಬರಬರುತ್ತ ಬುದ್ಧಿವಂತಿ ಗೆಯ ಕೆಲಸ ಕಲಿಯುತ್ತಾ ಬಂದು ಹಿರಿಯರ ನಂಬಿಕೆಗೆ ಪಾತ್ರನಾದ. ಅವನಿಗೆ ಒಪ್ಪಿಸಬಾರದ ಕೆಲಸವಿಲ್ಲ; ಹಾಗು ಆತನು ತನ್ನ ಪಾಲಿಗೆ ಬಂದ ಕೆಲಸವನ್ನು ಶ್ರದ್ಧೆಯಿಂದ ಮಾಡದ ದಿನವಿಲ್ಲ-ಎಲ್ಲರ ಬಾಯಲ್ಲೂ ತಂಗವೇಲು.

ಒಂದು ದಿನ ಇಟಲಿಯವರನ್ನು ಓಡಿಸಿದ್ದಾರೆ. ಕಡೆ ಕಡೆಗೆ ಕೆಲವರಿಗೆ ಏಟ-ಬಿದ್ದೂ ಬಿಟ್ಟಿದೆ. ಅಂಥವರನ್ನೆಲ್ಲ ಆಸ್ಪತ್ರೆಗೆ ಸಾಗಿಸಬೇಕು. ತಂಗವೇಲು ಹೋಗಿದ್ದ. ಅಡುಗೆ ಬೇಗ ಮಾಡಬೇಕಾಗಿತ್ತು. ತಂಗವೇಲು ನಗುನಗುತ್ತ "ಪಳನಿಮೂರ್ತಿ"ಯಂತೆ ಹೋಗಿ ನಿಂತ. ಸ್ವಲ್ಪ ಹೊತ್ತಿನ ನಂತರ ಬಿಡಾ ರದ ಯಜಮಾನ ಬಂದು ವಿದ್ಯುತ್ ತಂತಿಗಳನ್ನು ಎಳೆದು ಹಾಕಿರೆಂದ. ತಂಗವೇಲು ತಾಯಿಗೆ ಮಾತು ಕೊಟ್ಟಿದ್ದ-ಯಾವ ಮರವನ್ನೂ ಹತ್ತುವುದೇ

ಇಲ್ಲವೆಂದು! ಈಗ ಇನ್ನಾರೂ ಇರಲಿಲ್ಲ. ತಂಗವೇಲುವೇ ಹತ್ತಬೇಕು. ಇನ್ನಾರೂ ಇರಲಿಲ್ಲ. ತಂದೆಗಾಗಿ ಕಾದು ನೋಡಿದ. ತಂದೆ, ನಾರಾಯಣ ಸ್ವಾಮಿ ಬರಲಿಲ್ಲ. ಹತ್ತಿಬಿಟ್ಟ, ತಂತಿ ಬಿಡಿಸಿ, ತೆಗೆದು ಕೆಳಗೆ ಹಾಕುವ ಕಾಲದಲ್ಲಿ ಎಲ್ಲಿಂದಲೋ ವಿದ್ಯುತ್ ಪ್ರವಾಹ ಹರಿದುಬಂತು. ತಂಗವೇಲು ಕೆಳಗೆಬಿದ್ದು ಮಿಲಿಮಿಲಿ ಒದ್ದಾಡಿ ಪ್ರಾಣ ಬಿಟ್ಟನು.

ನಾರಾಯಣಸ್ವಾಮಿಗೆ ತಿಳಿಯಿತು.

ದೊಡ್ಡ ಸೇನಾನಾಯಕರೆನಿಸಿದ್ದ ಪರಂಗಿಯವರೊಬ್ಬರು ಬಂದು ತಂಗವೇಲು ಪಡೆಯಬೇಕಾದ ಬಿರುದಿನ ಬಿಲ್ಲೆಯನ್ನು ಆ ತಂದೆಯ ಶರಟಿನ ಮೇಲೆ ಚುಚ್ಚಿ ಹೆಮ್ಮೆಬಟ್ಟರು. ನಾರಾಯಣಸ್ವಾಮಿ ಅಳಲಿಲ್ಲ, ನಗಲಿಲ್ಲ.

ಈಗ ಹಿಂತಿರುಗುವಾಗ ಏನುಮಾಡುವುದಕ್ಕೂ ತೋಚಲಿಲ್ಲ. ಆಗ ತನ್ನ ಮೇಲ್ಪಟ್ಟ ಅಧಿಕಾರಿಗಳಿಂದ ಮತ್ತು ಸರಿಸಾಟಿ ಗೆಳೆಯರಿಂದ ಹೊಗಳಿಸಿ ಕೊಂಡನು—"ಎಂಥಾ ತ್ಯಾಗಮಯ ಜೀವನ. ತನ್ನ ಹಿರಿಯ ಮಗನನ್ನೇ ಜಗತ್ತಿನ ಹಿತಕ್ಕಾಗಿ ಬಲಿಕೊಟ್ಟಿದಾನೆ. ಅವಳೆಂಥಾ ತಾಯಿ, ಪತಿಯನ್ನು ಕಳಿಸಿದುದೂ ಅಲ್ಲದೆ ಈ ರಣರಂಗಕ್ಕೆ ತನ್ನ ಹಿರಿಯ ಪುತ್ರನನ್ನೂ ಕಳಿಸಿ ದ್ದಾಳೆ. ಜೈ ತಂಗವೇಲು, ನಿನಗೆ ವೀರಸ್ವರ್ಗ ಶಾಶ್ವತ! ಜೈ ನಾರಾಯಣ ಸ್ವಾಮಿ! ಜೈ ತಂಗವೇಲು ತಾಯಿಗೆ, ಜೈ ಜೈ!" ಹೀಗೆಲ್ಲಾ ಉಪನ್ಯಾಸ ಮಾಡಿ ಅವನನ್ನು ಮಣ್ಣು ಮಾಡಿದಾಗ, ನಾರಾಯಣ್, ಮೇಜರ್ ನಾರಾಯಣ್, ಯಾವ ದುಃಖವನ್ನೂ ಕಾಣಲಿಲ್ಲ. ಆ ವೀರ ಉತ್ಸಾಹದ ಉನ್ಮತ್ತತೆ. ಹಿಪ್ ಹಿಪ್ ಹುರ್ರೇ, ಎಂದು ಕೂಗಿಕೊಂಡು ಹೋಗುವ ಗೆಳೆಯರ ಸಂಗಡ, ನುಗ್ಗಿ ನಡೆದನು.

ತನ್ನ ಬಲಗೈಯಾದ, ತನ್ನ ವೃದ್ಧಾಪ್ಯದ ಊರೆಗೋಲಾದ, ತನ್ನ ಪತ್ನಿಯ ವಾತ್ಸಲ್ಯ ಪುತ್ಥಳಿಯಾದ, ಆ ಮಗನನ್ನು ಯುದ್ಧದ ಮಾರಿಗೆ ಬಲಿಕೊಟ್ಟ ನೋವು ಆಗ ಕಾಣಲಿಲ್ಲ. ಮಗನನ್ನು ಕಳೆದುಕೊಂಡ ಮೇಲೆ, ಇನ್ನೂ ನಾಲ್ಕೈದು ರಣರಂಗದಲ್ಲಿ ಹೋರಾಡಿ ಹಿಂತಿರುಗಿದ್ದಾನೆ. ವಿಮಾನ ದಲ್ಲಿ, ಸಮುದ್ರದಲ್ಲಿ, ರೈಲಿನಲ್ಲಿ ಯಾತರಲ್ಲಿಯಾದರೂ, ಎಲ್ಲಿಯಾ ದರೂ ಪ್ರಯಾಣ ಮಾಡಬಹುದು. ಸಿಪಾಯಿ ಹುದ್ದೆ ಬೇಡ ದಿದ್ದರೆ ಜಮೀನ್ದಾರನಾಗಿ ಎಲ್ಲಿಯಾದರೂ ನೆಲಸಲೂ ಅನುಕೂಲವಿದೆ.

ಪೆನ್ಶನ್ ಬೇಕಾದರೆ ಕೊಡುತ್ತಾರೆ. ತನ್ನ ಸಂಬಳ ಮತ್ತು ಮಗನ ಸಂಬಳ ಪಡೆಯಬಹುದಾಗಿತ್ತು. ಇಷ್ಟೆಲ್ಲ ಜಯಭೇರಿ ಹೊಡೆಸಿಕೊಂಡು ಬರುತ್ತಾ ಇದ್ದಾನೆ, ನಾರಾಯಣ್, ಮೇಜರ್ ನಾರಾಯಣಸ್ವಾಮಿ........

ಮೇಲ್ತರಗತಿಯ ಗಾಡಿಯಲ್ಲಿ ಕುಳಿತಿರಬಹುದಾಗಿತ್ತು. ಕೆಂಪು ಜನರ ಸರಿಸಾಟಿಯಾಗಿ ಕುಳಿತಿರಬಹುದಾಗಿತ್ತು. ಇಲ್ಲ ಈಗ ಅದೇನೂ ಬೇಕಿಲ್ಲ. ಬೆಂಗಳೂರು ಹಾದಿ ಬಂತೆಂದ ಕೂಡಲೆ ದಿಗಿಲಾಯಿತು. ಸೆಕೆಂಡ್ ಕ್ಲಾಸ್ ಗಾಡಿ ಬಿಟ್ಟು, ಪರಂಗಿಯವರ ಜೊತೆ ಬಿಟ್ಟು ಹಿಂದೂಗಳ ಜತೆಗೆ ಥರ್ಡ್ ಕ್ಲಾಸ್ ಗಾಡಿಯ ನೂಕುನುಗ್ಗಲಲ್ಲಿ, ಬಂದು ತೂರಿಕೊಂಡಿದ್ದಾನೆ—ಸಿಪಾಯಪ್ಪ! ಮೋರೆಯಲ್ಲಿ ಮೀಶೆ, ಕೈಲಿ ಬಂದೂಕು, ಎದೆಪಟ್ಟೆಯಲ್ಲಿ ತೋಟಾಗಳು, ನಡುವಲ್ಲಿ ಕಿರುಗತ್ತಿ, ಕಣ್ಣುಹುಬ್ಬುಗಳಲ್ಲಿ ಮೇಜರ ಕಳೆ—ಇವೆಲ್ಲ ಉಳ್ಪಾತ ಬಂದನೆಂದು, ಸಭ್ಯಜನ, ದಾರಿ ಕೊಟ್ಟರು. ಮಕ್ಕಳು ಮೋರೆ ನೋಡಿ ಬೆದರಿದರು, ಹೆಂಗಳು ದಾರಿ ಕೊಟ್ಟರು. ಬಹಳ ಗೌರವ ಅಂಜಿಕೆ ತೋರಿಸಿದರು ಉಳಿದವರೆಲ್ಲ!

ಯಾರಾದರೂ ಅವನನ್ನು ಮಾತಾಡಿಸಿಯಾರೆ? ಇಲ್ಲ! ಅಷ್ಟು ಹೊತ್ತು ಕಿಟಕಿಯಾಚೆ ನೋಡಿದ. ಅನಂತರ ಗಾಡಿಯೊಳಗಿನ ಜನಗಳನ್ನು ನೋಡಿದ. ತನ್ನ ಮಗನ ಸಮ ವಯಸ್ಸಿನವರು ಅನೇಕರಿದ್ದರು ಅಲ್ಲಿ. ತನ್ನ ಪತ್ನಿಯಂತೆ ಇದ್ದವರು ತಮ್ಮ ತಮ್ಮ ಪ್ರಾಯದ ಮಕ್ಕಳ ಸಂಗಡ ಸಂತೋಷದಿಂದ ಕುಳಿತಿದ್ದರು. ಆದರೆ ತಂಗವೇಲು ಎಲ್ಲಿದ್ದಾನೆ? ಆತನ ತಾಯಿ ಅನ್ನಪೂರ್ಣೆ ಎಲ್ಲಿದ್ದಾಳೆ? ಮಗ ಮಹಾರಾಯ ಯುದ್ಧದಲ್ಲಿ ಮಡಿದು ಮರುಭೂಮಿಯ ಅಂಚಿನಲ್ಲಿ ಮಣ್ಣಾಗಿದ್ದಾನೆ....ಅನ್ನಪೂರ್ಣೆ ತಿಂಡಿ ತೀರ್ಥ ಮಾಡಿಕೊಂಡು ಮನೆಯಲ್ಲಿ ಕಾದಿದ್ದಾಳೆ. ಹೊಸ ಮನೆ ಕಟ್ಟಿದ್ದಾರೆ. ಮಗಳಿಗೆ ಗಂಡು ಗೊತ್ತಾಗಿದೆ. ಮಗನಿಗೆ, ಅಂದರೆ ತಂಗವೇಲುಗೆ ಹೆಣ್ಣು, ಚಂದೊಳ್ಳೆ ಹೆಣ್ಣು ಗೊತ್ತಾಗಿದೆ. ಎರಡೂ ಮದುವೆ ಒಟ್ಟಾಗೆ ಮಾಡಬೇಕು. ತಂಗವೇಲುವಿನ ಹೆಂಡತಿಯಾಗುವವಳ ಫೋಟೋ ಕಳಿಸಿದ್ದಾರೆ. ಈಗ ಸ್ಟೇಷನ್ನಿಗೆ ಯಾರು ಬರುತ್ತಾರೋ ಕಾಣೆ. ಏನು ಹೇಳಬೇಕು ಅರಿಯ—ವರ್ಷವಾದರೂ ಉತ್ತರ ಕೊಡದೆ ಮಗ ಸ್ವರ್ಗವಾಸಿಯಾದ ವಿಷಯ ತಿಳಿಸದೆ ಇದ್ದಾನೆ.

........ತನ್ನ ಮಗಳಿಗೆ ತಕ್ಕ ಗಂಡನೆಂದು, ತಂಗವೇಲುವಿನ ಹಳೆಯ ಗೆಳೆಯನನ್ನು ಮುನ್ನವೇ ಕಳಿಸಿದ್ದಾನೆ. ತಂಗವೇಲು ಸಂಪಾದಿಸಿದ್ದನ್ನೆಲ್ಲ ಮಗಳ ಬಳುವಳಿಗೆ ಕಳಿಸಿದ್ದಾನೆ. ತಂಗವೇಲು ಇದ್ದಾಗ ತೆಗೆಸಿದ್ದ ಫೋಟೋವನ್ನು ಮದಿವೆಗೆ ಕಾದ ಆ ಹುಡುಗಿಯ ತಸಬೀರಿನ ಸಂಗಡ ಇಟ್ಟಿದ್ದಾನೆ. ಆದರೆ ಈಗ ಬೆಂಗಳೂರಿಗೆ ಹೋಗುವುದು ಹೇಗೆ .......?

ಹಿಂದೆ ರೈಲು ಹತ್ತಿದಾಗ ಇಬ್ಬರೊಟ್ಟಾಗಿ ಹತ್ತಿದ್ದರು. ಈಗ ಇಳಿಯುವಾಗ ಒಬ್ಬನೇ ಇಳಿಯಬೇಕು. ಏನು ಗತಿ, ಏನು ಗತಿ! ತಂಗವೇಲುವಿನ ತಾಯಿಗೆ ಏನು ಹೇಳಬೇಕೆಂಬುದೇ ಅರಿಯ. ಇದುವರಿಗೆ ರಣದ ಉತ್ಸಾಹದ ಹಿಂದೆ ಹಿಮವಾಗಿ ಹೆಪ್ಪುಗಟ್ಟಿ ಕಾದಿದ್ದ ಮಂಜಿನ ರಾಶಿಯೆಲ್ಲ ಒಂದೇ ಬಾರಿಗೆ ಕಳಚಿಬೀಳುವಂತಿದೆ. ಪತ್ನಿಯ ದರ್ಶನದ ಕಾವಿನಲ್ಲಿ ಅದು ಕರಗಿ ಹೋಗುವುದು. ಎಲ್ಲಿ ಆಕೆಯ ಜೀವನ ಜ್ಯೋತಿಯೇ ಆರಿ ಹೋಗುವುದೋ—ಹೀಗೆಂದು ಭಾವನೆಗಳು ಒತ್ತರಿಸಿ ಬಂದಿವೆ.

ಅಷ್ಟು ಜನರಿದ್ದರು, ಯಾರಾದರೂ ಅವನನ್ನು ಹಿಡಿದು ಹೊಡೆದು ಕೊಂದಿದ್ದರೂ ತೃಪ್ತಿಯೆ? ಅವನು ಬೆಂಗಳೂರು ಮನೆಗೆ ಹಿಂತಿರುಗಲಾರ: ಹೋಗಲಿ ಗಟ್ಟಿಮುಟ್ಟಾಗಿ ಕರೆದೊಯ್ಯಲು ಬದಲು ಈ ವಿಧಿಯು ನಾರಾಯಣಸ್ವಾಮಿಯ ಒಂದು ಅಂಗವನ್ನು ಕಿತ್ತುಕೊಳ್ಳಲಿಲ್ಲ. ಕೈಯ್ಯೋ, ಕಾಲೋ, ಕಣ್ಣೋ ಹೋಗಿದ್ದರೆ, ಆತ ಧೀರಪುತ್ರ ಉಳಿಯುತ್ತ ಇದ್ದನೋ ಏನೋ. ಈಗ ಹೀಗೆ ಹಿಂದಿರುಗುವುದೆಂತು! ಕಾಗದಗಳಲ್ಲಿ ಸುಳ್ಳಂಪಳ್ಳಿ ಬರೆದಂತೆ ಎದುರಲ್ಲಿ ಹೇಳಲಾದೀತೆ........! ಹೀಗೆಲ್ಲ ನಾರಾಯಣಸ್ವಾಮಿ ವ್ಯಥೆ ಪಡುತ್ತ ಇದ್ದ.

ಬೆಂಗಳೂರು ಬಂತು, ಇನ್ನೇನು ಎಂದು ಎಲ್ಲರೂ ಗಂಟು ಮೂಟೆ ಹುಡುಕಿ ತೆಗೆದಿಟ್ಟುಕೊಂಡರು. ಮೇಜರ್ ನಾರಾಯಣಸ್ವಾಮಿ ಸುಮ್ಮನೆ ಕುಳಿತಿದ್ದ. ಸ್ಟೇಷನ ಬಳಿಯಿಂದ ಹೆಣ್ಣು ಕೂಗು ಕೇಳಿಸಿತು—"ತಂಗವೇಲು ಇಲ್ಲೈ! ಅಪ್ಪಾವಂದುಟ್ಟಾ........!" "........ರೀ! ಏಳಿರೀ! ನಿಮ್ಮವರೋ, ನೋಡಿರಿ! ಪಾಪ!!" ಎಂದು ನಾನು ಅಲ್ಲಾಡಿಸಿ ಕೂಗಿದೆ. ನಾರಾಯಣಸ್ವಾಮಿ ತಲೆ ಎತ್ತಲಿಲ್ಲ. ಕಿಟಕಿಯ ಬಳಿ ತಲೆಯಿಟ್ಟು ಕುಳಿತಿದ್ದ. ರೈಲು

ನಿಂತಾಗ ಗಾಡಿ ಸ್ವಲ್ಪ ಕುಲುಕಿತು. ನಾರಾಯಣಸ್ವಾಮಿಯ ಭಾರಿಯ-ರುಮ್ಮಾಲು ಆಚೆಗೆ ಬಿತ್ತು........

ಹೊರಗೆ ಗದ್ದಲ ಹೆಚ್ಚಾಯಿತು. ಮಕ್ಕಳು ಮರಿ ಚಿಳ್ಳೆ ಪಿಳ್ಳೆ ಕಟ್ಟಿಕೊಂಡು, ಗಂಟಿಲ್ಲ ಬಗಲಿಗೆ ಇಟ್ಟುಕೊಂಡು ನಾನೂ ನೂಕುನುಗ್ಗಿನಲ್ಲೇ ಇಳಿದು ಬಂದೆ.

ಹೊಸ ದಿನದ ಬಿಸುಲಲ್ಲಿ, ಹೊಸ ಹಕ್ಕಿಗಳ ಕೂಗಿನಲ್ಲಿ, ಜೀವನ ಹೊಸದಾಯಿತು. ಹೊಸ ಗೆಳೆಯರ ಸಂಗಡ ಜೀವನ ಹಸನಾಯಿತು. ಆದರೂ ಮೋಜರು ನಾರಾಯಣಸ್ವಾಮಿಯನ್ನು ನೋಡಬೇಕೆನ್ನಿಸಿದೆ. ಆ ದಿನ ಆತ ಆ ತಂಗವೇಲು ತಾಯಿಗೆ ಏನು ಹೇಳಿ ಸಮಾಧಾನ ಪಡಿಸಿದ್ದಾನು —ಎಂದು ತಿಳಿಯುವ ಬಯಕೆಯು ಮಾತ್ರ ಬೇರೂರಿ ನಿಂತಿದೆ.

# ೪. ಪದಕ

ಅವಳ ಹೆಸರು ರೇಖಾ. ಚಿತ್ರಕಲೆಯೆಂದರೆ ಆಕೆಗೆ ತುಂಬ ಪ್ರೀತಿ. ಸರಿಯಾದ ಗುರು ದೊರತ. ಆತನು ರೇಖಾದೇವಿಗೆ ಸರಿಯಾದ ಅನ್ವೃತ ಮಾರ್ಗ ತೋರಿಸಿದ. ಪ್ರೀತಿ ಉತ್ಸಾಹವಾಯಿತು. ಉತ್ಸಾಹ ಅಭ್ಯಾಸಕ್ಕೆ ಹರಿದು ಫಲರೂಪಕ್ಕೆ ಬಂತು. ರೇಖಾ ಚಿತ್ರ, ವರ್ಣಚಿತ್ರಗಳಲ್ಲಿ ಪ್ರವೀಣೆ ಯಾದಳು ರೇಖಾದೇವಿ.

ಈ ವೇಳೆಗೆ ರೇಖಾ ಪ್ರೌಢೆಯಾದರೂ ವಿವಾಹದ ಆಶೆ ತೊರೆದು ಪ್ರವಾಸಿಯಾದಳು. ಹಿಂದೂಸ್ಥಾನದ ನಗರಗಳಲ್ಲೆಲ್ಲ ತಿರುಗಿದಳು. ನಿಂತ ಲ್ಲೆಲ್ಲ ಜಾತಿ ವಿಜಾತಿಯ ಜನರನ್ನೆಲ್ಲ ನಿಲ್ಲಿಸಿಕೊಂಡು ಚಿತ್ರಗತ ಮಾಡಿದಳು. ಯಾವ ಮೋರೆಯಾದರೂ ಚಿತ್ರಿಸಬಲ್ಲವಳಾದಳು. ಅವಳ ಹೆಸರು ಎಲ್ಲೆಲ್ಲೂ ಪ್ರಸಿದ್ಧವಾಯಿತು.

ರೇಖಾದೇವಿಗೆ ತೃಪ್ತಿಬರಲಿಲ್ಲ. ಮುಕಚಿತ್ರ ಬರೆದರೆ ಸಾಲದು. ಭಾವಚಿತ್ರ ಬರಿಯಬೇಕೆನಿಸಿತು. ಅದಕ್ಕೆ ಪ್ರಾಣಿಗಳ ಮುಖಚಿತ್ರ-ಬಿಡಿ ಸುತ್ತ ಹೋದಳು. ಅವುಗಳ ಕ್ರೌರ್ಯ, ಶಾಂತ, ಮುಗ್ಧಭಾವಗಳನ್ನು ರಂಗುರಸಗಳಲ್ಲಿ ಬರೆದು ತಿದ್ದಿದಳು. ಅವು ಚಿತ್ರಫಲಕದಲ್ಲಿ ಮೂಡಿದ ಮುತ್ತುಗಳಂತೆ ಇದ್ದವು. ಅವಳ ಸಿಂಹವು ನಿಜವಾದ ಸಿಂಹವನ್ನು ಬೆದರಿ ಸಿತು. ಅವಳ ಜಿಂಕೆಯನ್ನು ಕಂಡು ಹೆಣ್ಣು ಜಿಂಕೆಯು ಮೈಮರೆತಿತು. ಜನ ಬೆರಗಾದರು. ದೇಶಾದ್ಯಂತ ರೇಖಾದೇವಿಯ ಮಾತೇ ಮಾತು. ಅವಳಿಗೆ ಈಗ ಚಿತ್ರಲೇಖಾದೇವಿಯೆಂಬ ಹೆಸರೇ ನಿಂತಿತು.

ಚಿತ್ರಲೇಖನದಲ್ಲಿ ಮೇಲು ಮೆಟ್ಟಲನ್ನು ಏರುತ್ತ ಹೋದವಳು ಜೀವನದ ಕಡೆ ತಿರುಗಿ ನೋಡಿದಳು. ಯುವಕನನ್ನು ಕಂಡರೆ ಈಗ ಅದೇನೋ ಒಂದು ಬಗೆಯಾಗುವುದು. ತುಟಿ ಅದುರುವುದು, ಗಲ್ಲ ಕೆಂಪಾಗುವುದು, ಮೈ ನವಿರೇಳುವುದು, ಏನೇನೆಲ್ಲ ಕಂಡು ಚಿತ್ರಿಸಿದಾಕೆಗೆ ತನ್ನ ಯೌವನದ ಕೂಗೇ ಅರಿವಾಗಿರಲಿಲ್ಲ ಆವರೆಗೆ. ಒಮ್ಮೆ ತನ್ನ ಚಿತ್ರವನ್ನೇ ತಾನು ಕನ್ನಡಿಯಲ್ಲಿ ನೋಡಿ ಚಿತ್ರಿಸಿಕೊಂಡಳು. ತನ್ನನ್ನೇ ತಾನು ಮೋಹಿಸಿದಳು. ಅನಂತರ........

ಇಂಥಾ ಕುಶಲಮತಿಯನ್ನು ಕಣ್ಣೆತ್ತಿ ನೋಡಿ ಮೋಹದ ಜ್ವಾಲೆಯೆಬ್ಬಿಸುವಾತನು, ಒಬ್ಬ ಯುವಕನು ಅದೇ ಹಾದಿಯಲ್ಲಿ ಹತ್ತಿ ಬಂದನು. ಆತನು ಮಹಾ ಸಂಗೀತಗಾರ. ರಾಗ ಸ್ವರಗಳಿಂದ ಸಿಂಹವನ್ನು ಪಳಗಿಸಿ, ಚಿಗರೆಯನ್ನು ರೇಗಿಸಿ, ಮಾನವರಿಗೆ ಹುಚ್ಚು ಹತ್ತಿಸುವ ಹಟದವನು. ಚಿತ್ರಲೇಖೆಯು ಆ ಚತುರನಿಗೆ ಮನಸೋತಳು. ಆತನ ದನಿಗೆ ಈಕೆಯ ದನಿ ಉಬ್ಬಿಹೋಗುವುದು. ಎಡಬಿಡದೆ ಆತನ ಸಂಗಡಲೇ ಇರುತ್ತ ಇರುವಳು. ಆತನು ಗಾನವಾಡಿದರೆ ಈಕೆ ಆ ಮುಖಭಾವಗಳನ್ನು ಚಿತ್ರಿಸುವಳು. ಆತನ ಮೊಕದ ಆವರಣದಲ್ಲಿ ಅದೆಷ್ಟೋ ಭಾವಗಳೆಲ್ಲ ಮೂಡಿ ಮರೆಯಾದರೂ ಈಕೆಯ ಚಿತ್ರಫಲಕಗಳಲ್ಲಿ ಮಾತ್ರ ಅಮರವಾಗಿ ಮೂರ್ತಿವೆತ್ತವು. ಇವರೀರ್ವರೂ ಒಂದಾದರು, ಒಡನಾಡಿಗಳಾದರು. ಚಿತ್ರಕಲೆಯು ರಾಗರಸಿಕನನ್ನು ಒಡಗೂಡಿತು. ಎರಡು ನದಿಗಳ ಸಂಗಮವಾಯಿತು.

ಆ ಮಹಾ ನಗರದಲ್ಲಿ ಒಂದು ಕಲಾಪ್ರದರ್ಶನಕ್ಕೆ ಏರ್ಪಾಡಾಯಿತು. ಒಬ್ಬ ಕೋಟ್ಯಾಧೀಶನು ಹತ್ತು ಲಕ್ಷ ರೂಪಾಯಿಗಳ ಒಂದು ಪದಕವನ್ನು ಮುಕಭಾವ ಪ್ರದರ್ಶನಕ್ಕೆ ಮೀಸಲಾಗಿ ಇಟ್ಟನು. ಯಾವ ಚಿತ್ರದಲ್ಲಿ ಮುಕಭಾವವು ಜೀವಂತವಾಗಿ ಚಿತ್ರಿತವಾಗಿದೆಯೋ ಆ ಚಿತ್ರಕ್ಕೆ ಆ ಪದಕ. ಅದು ರೇಖಾದೇವಿಗೇ ಮೀಸಲೆಂದು ಎಲ್ಲರೂ ಹೇಳುತಲಿದ್ದರು. ಅಂತೂ ನೂರಾರು ಚಿತ್ರಗಳು ಅಲ್ಲಿಗೆ ಬಂದಿದ್ದವು.

ರೇಖೆಗೆ ಪದಕ ಮುಖ್ಯವೆ? ಅಲ್ಲ! ಅದಕ್ಕೂ ಮಿಗಿಲಾಗಿ ಚಿತ್ರಕಲೆ! ರೇಖಾದೇವಿಗೆ ತನ್ನ ಕುಂಚದ ಮುಖದಲ್ಲಿ ಏನೇನೆಲ್ಲ ಶಕ್ತಿಯಿದೆ ಎಂಬುದನ್ನು ಪ್ರಪಂಚಕ್ಕೆ ತೋರಿಸುವ ಹಂಬಲ, ಆಸೆ, ಉತ್ಸಾಹ, ಹಠ!

ರಾಗಚತುರನೂ ಚಿತ್ರಕೋವಿದೆಯೂ ಸೇರಿದರು. ಚಿತ್ರಕ್ಕೆ ತಕ್ಕ ಫಲಕವನ್ನು ಹೊಸದಾಗಿ ನೇದ ಗಾಜಿನ ಬಟ್ಟೆಯಲ್ಲಿ ತಯಾರಿಸಿದರು. ಅಲ್ಲಿಯವರೆಗೆ ಇಬ್ಬರೊಂದಾಗಿದ್ದರು. ಚಿತ್ರ ಮೂಡುತ್ತಾ ಬಂದಾಗ ಈತ ಕುಳಿತು ರಾಗಾಲಾಪ ಮಾಡುವುದು, ಆಕೆ ಕನ್ನಡಿನೋಡಿ ಆತನ ಚಿತ್ರ ವನ್ನು ಬರೆಯುತ್ತ ಇರುವುದು. ಯಾವ ಭಾವನೆಯನ್ನು ಚಿತ್ರಿಸುವುದೆಂದು ಚರ್ಚಿಸಿ ಕಡೆಗೆ ಯಾರೂ ಬರೆಯದ ಯಾತನಾ ಭಾವವನ್ನೇ ಚಿತ್ರ ಮುಖ ದಲ್ಲಿ ಮೂಡಿಸಬೇಕೆಂದಾಯಿತು. ಪ್ರೇಮಯಾತನೆಯನ್ನು ಚಿತ್ರಿಸಿದಳು ರೇಖಾದೇವಿ. ಆತನೇ ಆ ಚಿತ್ರಕ್ಕೆ ಮಾದರಿ!

ಪ್ರದರ್ಶನ ಶಾಲೆಗೆ ತೆಗೆದೊಯ್ದು ಬೆಳಕು ನೆರಳು ಸಮಂಜಸವಾಗಿ ಒಡಗೂಡುವ ಸ್ಥಳದಲ್ಲಿ ಚಿತ್ರ ಫಲಕದ ಸ್ಥಾಪನೆಯಾಯಿತು. ಕಾರ್ಯ ದರ್ಶಿ ಬಂದು ಆ ಚಿತ್ರಕ್ಕೆ ವಿಳಾಸ ಕ್ರಯ ಮುಂತಾದ್ದೆಲ್ಲ ಗೊತ್ತುಹಚ್ಚಿ ಹೊರಟುಹೋದನು. ಮಾರನೆಯ ದಿನವೇ ಪ್ರದರ್ಶನ ತೆರೆಯುವುದು— ರೇಖಾದೇವಿ ತನ್ನ ಗೆಳೆಯನ ಸಂಗಡ ತೃಪ್ತಿಯಿಂದ ಮನೆಯಕಡೆ ಹೊರಟು ಹೋದಳು.

ಬೆಳಗಿನ ಜಾವ ಸಂಗೀತಗಾರನು ತನ್ನ ಮನೆಯಿಂದ ಎದ್ದು ಬಂದನು. ಚಿತ್ರಲೇಖಾದೇವಿಯನ್ನು ಕರೆದೆಬ್ಬಿಸಿದನು. ಇವರೀರ್ವರ ಫಲವಾದ ಆ ಚಿತ್ರ ವನ್ನು ಸ್ಪರ್ಧಿಸುವ ಇನ್ನೊಂದು ಪ್ರೇಮರಸ ಚಿತ್ರವು ಪ್ರದರ್ಶನಕ್ಕೆ ಬಂದಿತು. ಲಕ್ಷಾಂತರ ರೂಪಾಯಿಯ ಪದಕ ಬಹುಮತಿಯಾಗಿ ಬರುವ ಮಾತೇ ಅಲ್ಲ. ಇದುವರಿವಿಗೆ ಚಿತ್ರಲೇಖನ ಶಿಖಾಮಣಿಯಾಗಿದ್ದ ರೇಖಾದೇವಿಗೆ ಈಗ ಸೋಲೆಂದರೆ ರುಚಿಸದು. ಮೊದಲಿನ ಚಿತ್ರದ ಮುಖಭಾವವನ್ನು ಬದಲಾ ಯಿಸಬೇಕು ಭಯ ಮತ್ತು ಯಾತನೆಯ ಭಾವಗಳನ್ನು ಮಿಶ್ರಮಾಡಿದರೆ ಸರಿಬರಬಹುದೆಂದು ಇಬ್ಬರೂ ಯೋಚಿಸಿದರು. ಇಬ್ಬರೊಟ್ಟಾಗಿ ಪ್ರದರ್ಶನ ಶಾಲೆಗೆ ನಡೆದರು. ಯಾರೂ ಎಂದೂ ಕಾಣದ ಸೃಷ್ಟಿಯನ್ನು ಚಿತ್ರಪಟದಲ್ಲಿ ಬಿಡಿಸಿಬಿಡುವ ಆಸೆ ಆ ಇಬ್ಬರಿಗೆ.

ಕಾರ್ಯದರ್ಶಿಗೆ ರಾತ್ರಿಯೆಲ್ಲಾ ನಿದ್ದೆಯಿಲ್ಲ. ಹಗಲು ವಿರಾಮವಿರ ಲಿಲ್ಲ. ಚಿಗುರು, ಹೂವು, ಹಾರ, ಕಾಯಿ, ಹಣ್ಣುಗಳನ್ನು ಜೋಡಿಸಿ ಕೊಂಡು ಚಪ್ಪರ ಅಲಂಕಾರ ಮಾಡಿದ್ದನು. ಕುರ್ಚಿ, ಜಮಖಾನೆ, ಗದ್ದುಗೆ,

ಮೇಜ, ಬೀಸಣಿಗೆಗಳ ವ್ಯವಸ್ಥೆಯಾಗುತಲಿತ್ತು. ಅದಾದನಂತರ ಸುತ್ತಲಿನ ರಸ್ತೆಗಳೆನ್ನೆಲ್ಲ ಸರಿಪಡಿಸುವುದೊಂದಿತ್ತು. ಆಗ ಚಿತ್ರಲೇಖಾ ಬಂದಳು. ಮುಂದಣ ಬಾಗಿಲುವಾಡವೆಲ್ಲ ಅಲಂಕರಿಸಿಕೊಂಡು ಉದ್ಘಾಟನೆ ಮುಹೂರ್ತಕ್ಕಾಗಿ ಕಾದಿತ್ತು. ಅಂದಿನ ಅಧ್ಯಕ್ಷರವಿನಾ ಇನ್ನಾರೂ ಅದನ್ನು ಮುಟ್ಟುವಂತೇ ಇರಲಿಲ್ಲ. ಆದುದರಿಂದ ಚಿತ್ರಲೇಖೆಯು ರಾಗ ಚತುರನ ಸಂಗಡ ಇನ್ನೊಂದು ಪಕ್ಕದ ಬಾಗಿಲಿನಿಂದ ಒಳಹೊಕ್ಕು ಅಲ್ಲಿ ಇಬ್ಬರೂ ಕೂಡಿ ಚಿತ್ರವನ್ನು ಮಾರ್ಪಡಿಸುವ ಗದ್ದಲದಲ್ಲಿದ್ದರು. ಸ್ವಲ್ಪಹೊತ್ತಿನ ನಂತರ ಹೊರಗಿನವರು ಆ ಇಬ್ಬರನ್ನೂ ಮರತೇಬಿಟ್ಟರು.

ಚಿತ್ರದ ಹಲಗೆಗಂತೂ ಅದು ಗದ್ದಲವೇ ಆಗಿಹೋಯಿತು. ಪ್ರೇಮ ಯಾತನೆಯ ಚಿಹ್ನೆಗಳನ್ನೆಲ್ಲ ಅಳಿಸಿ, ಭಯದ ತಳಹದಿಯನ್ನು ಸಿದ್ಧಪಡಿಸಿ ಕೊಂಡು ಅನಂತರ ಯಾತನೆಯನ್ನು ಪ್ರತಿಫಲಿಸಬೇಕು. ಆ ಯಾತನೆಯು ಗೆಳೆಯನಾದ ರಾಗಚತುರನ ಮೋರೆಯಲ್ಲಿ ಮೂಡಬೇಕು. ಆತನು ಏನೇನೋ ಭಯದ ಯಾತನೆಗಳನ್ನೂ, ಯಾತನೆಯ ಭಯಗಳನ್ನೂ ತನ್ನ ಮುಖದಲ್ಲಿ ಮಂಡಿಸಿದನು. ಎಷ್ಟಾದರೂ ಆಕೆಯ ಆ ಚಿತ್ರದಲ್ಲಿ ಆ ಯಮ ಯಾತನೆಯು ಜನಿಸಲಿಲ್ಲ. ಬಣ್ಣದ ಕುಂಚವು ಸೋತೇ ಹೋಗಿತ್ತೇನೋ ಬಲ್ಲವರಾರು ?

ಆಗ ರೇಖಾದೇವಿಯು ವರ್ಣಮಿಶ್ರಣಕ್ಕಾಗಿ ತನ್ನ ಬಳಿ ಇಟ್ಟು ಕೊಂಡಿದ್ದ ಚೂರಿಯನ್ನು ರಾಗಚತುರನ ಮೇಲುಗಡೆ ಹಿಡಿದು ಹೀಗೆಂದಳು —"ಗೆಳೆಯ, ಇಷ್ಟು ದಿನ ಪ್ರಯತ್ನಮಾಡಿದುದೆಲ್ಲ ವ್ಯರ್ಥವಾಯಿತು. ಈಗ ಲಾದರೂ ಇತ್ತ ನೋಡು. ಈ ಚೂರಿಯು ನಿನ್ನ ಭುಜದೊಳಗೆ ಹೋಗಿದೆ ಯೆಂದು ಭಾವಿಸು. ಎಲ್ಲಿ, ಎಲ್ಲಿ! ಹಾಗೆ........ಈಗ ನಾನು ಹೋಗಿ ರೇಖೆಗಳನ್ನು ಸರಿಪಡಿಸುವವರಿಗೆ ಹಾಗೇ........ಹಾಗೇ ಇರಲಿ........"

ಹೀಗೆಂದು ಹಲವುಬಾರಿ ಪ್ರಯತ್ನಿಸಿದಳು. ಆತನೂ ತನ್ನ ಶಕ್ತಿ ಮೀರಿ ಪ್ರಯತ್ನಿಸಿದನು. ಆದರೆ ಆ ಭಾವ ಬಂಗಿಯು ಫಲಕಾರಿಯಾಗಲಿಲ್ಲ. ಈಕೆ ಚಿತ್ರ ಫಲಕದ ಬಳಿಗೆ ಬಂದಾಗ ಯಾತನೆಯ ಭಾವವು ಅಷ್ಟು ಲಕ್ಷಣವಾಗಿ ವ್ಯಕ್ತಪಡುತ್ತಿರಲಿಲ್ಲ; ಮತ್ತು ಅದೇ ಭಾವವು ಆ ಚಿತ್ರದ ಹಲಗೆಯಲ್ಲಿ ಮೂಡುವಂತಿರಲಿಲ್ಲ.

ಈ ವೇಳೆಗೆ ಸೂರ್ಯ ಮೂಡಿದಾನೆ. ಹೊರಗಡೆಯೆಲ್ಲ ಜನಗಳ ಗದ್ದಲ. ಬ್ಯಾಂಡು ಬಾಜು ಬಜಂತ್ರಿಯೆಲ್ಲ ಮೊಳಗುತ್ತಿವೆ. ಹಲವು ತೆರನಾದ ಯಾನಗಳ ಗದ್ದಲ. ಅಧ್ಯಕ್ಷಮಹನೀಯರು ಬಂದಿದ್ದಾರೆ. ಎಲ್ಲ ಚಿತ್ರಕಾರರೂ, ಪುರವಂತರೂ ನೆರೆದಿದ್ದಾರೆ. ಪದಕವನ್ನು ವಿಜೃಂಭಣೆ ಯಿಂದ ತಂದು ಎಲ್ಲರಿಗೂ ಕಾಣುವಂತೆ ಮುಖಮಲ್ಲ ಪರದೆಯ ಮುಂದೆ ಇಟ್ಟಿದ್ದಾರೆ. ಇನ್ನೇನು ಒಂದು ಭಾಷಣವಾದನಂತರ ಪ್ರದರ್ಶನದ ಪ್ರಾರಂಭೋತ್ಸವವು ನಡೆಯಬೇಕು. ಕಾರ್ಯದರ್ಶಿಯು ಎಲ್ಲೆಲ್ಲಿ ನೋಡಿ ದರೂ ರೇಖಾದೇವಿಯು ಕಣ್ಣಿಗೆ ಬೀಳಲಿಲ್ಲ. ಆಕೆಯ ಗೆಳೆಯನಾದರೂ ಇಲ್ಲ. ಬೆಳಗು ಮುನ್ನ ಬಂದು ಹಿಂದಿರುಗಿ ಹೋಗಿರಬಹುದೆಂದು ಭಾವಿಸಿ ದ್ದನು. ಈ ದಿನದ ಬಹುಮಾನವು ರೇಖಾದೇವಿಗೇ ಸಲ್ಲಬಹುದು. ಆಕೆಯೇ ಇಲ್ಲದಿದ್ದರೆ ಹೇಗೆ? ರೇಖಾದೇವಿಯೆಲ್ಲಿ? ರೇಖಾದೇವಿಯೆಲ್ಲಿರಬಹುದು? ಅಲ್ಲಿಹೋಗಿ, ಇಲ್ಲಿನೋಡಿ-ಹೀಗೆಂದು ಓಡಾಟ ನಡೆಯುತ್ತ ಇತ್ತು, ಒಂದು ಕಡೆ; ಇನ್ನೊಂದು ಕಡೆ ಭಾಷಣಗಳೆಲ್ಲ ಮುಗಿದುಬಿಟ್ಟಿವೆ. ಕಾರ್ಯ ದರ್ಶಿಯು ಅಧ್ಯಕ್ಷರಿಗೆ ವರದಿಮಾಡಿ ಬೇಡಿಕೊಂಡಿದ್ದಾನೆ-"ಮಹನೀಯರೇ ಈ ಶುಭ ಮುಹೂರ್ತದಲ್ಲಿ, ಈ ಕಲಾಪ್ರದರ್ಶನದ ಕವಾಟೋದ್ಘಾಟನ ವನ್ನು, ಅಧ್ಯಕ್ಷಮಹನೀಯರು, ತಮ್ಮ ಅಮೃತ ಹಸ್ತದಿಂದ ಆಗಮಾಡಿಸ ಬೇಕೆಂದು ತಮ್ಮೆಲ್ಲರ ಪರವಾಗಿ ಬೇಡುತ್ತೇನೆ."

ಆಗ ಒಳಗಡೆ ಏನಾಗಿದೆ! ಕಲೆಯನ್ನು ಉಚ್ಚಮಟ್ಟಕ್ಕೆ ಏರಿಸುವ ಉತ್ಸಾಹದಲ್ಲಿ ರಾಗಚತುರನು ಒಪ್ಪಿದ್ದಾನೆ. ಶ್ರೀ ಕಲಾವಂತೆ ರೇಖಾ ದೇವಿಯು—ಯಾತನಾಭಾವವು ಮೂರ್ತಿಮತ್ತಾಗಿ ಮುಖದಲ್ಲಿ ಜನಿಸಿದರೆ ಸಾಕು, ಮತ್ತೊಮ್ಮೆ ಅದು ಚಿತ್ರದಲ್ಲಿ ಕಾಣಿಸಿಕೊಂಡರೆ ಸಾಕು, ಪುನಃ ಹೇಗಾದರೂ ಪ್ರಯತ್ನಪಟ್ಟು ಆದ ಗಾಯವನ್ನು ವೈದ್ಯರ ಸಹಾಯದಿಂದ ವಾಸಿಪಡಿಸಿಕೊಳ್ಳಬಹುದೆಂದು ಭಾವಿಸಿದ್ದಾಳೆ. ಹಾಗಾದರೆ ರೇಖಾದೇವಿಯ ಮುಖದಲ್ಲಿ ಯಾತನೆ ಮೂಡಿದರೆ ರಾಗಚತುರನು ಚಿತ್ರಿಸಬಲ್ಲನೆ? ಹಾಗಿ ದ್ದರೆ ಆಕೆಯು ಸಾವಿಗಾದರೂ ಸಿದ್ಧ; ಅಂಥಾದ್ದೊಂದು ಚಿತ್ರ ಪ್ರಪಂಚವಲ್ಲಿ ಸಾಧ್ಯವಾದರೆ ಸಾಕು. ರಾಗಚತುರನು ಆಕೆಯ ಮಾತಿಗೆ ಒಪ್ಪಲಿಲ್ಲ.

ಕಾರಣ, ಆತನ ಮಾತಿಗೆ ಕುಂಚವು ಚಲಿಸದು ! ಆತನೇ ಸಿದ್ಧನಾಗಿದ್ದನು ಆಗ ಆತ್ಮಯಜ್ಞಕ್ಕೆ.

ಶ್ರೇಷ್ಠ ಕಲೆಗಾಗಿ ಜೀವತೆತ್ತರೂ ಭಯವಿಲ್ಲ. ಆದರೆ ಭಯವೆಲ್ಲಿತ್ತು ! ಸಣ್ಣದೊಂದು ಚೂರಿಯು ಭುಜದೊಳಗೆ ನಾಟಿದರೆ ಸಾಯುವುದೆಲ್ಲಿಬಂತು ? ಒಂದು ತಿಂಗಳೊಳಗೆ ಆ ಗಾಯ ವಾಸಿಯಾಗದೆ ಇರುವುದೆ ? ಹೀಗೆಲ್ಲ ಭಾವನೆಗಳು ಹರಿದಿವೆ. ಚೂರಿಯು ರಾಗಚತುರನ ಭುಜದಲ್ಲಿ ಚುಚ್ಚಿಕೊಂಡಿದೆ. ಯಮಯಾತನೆಯ ಚಿತ್ರವು ಚಿತ್ರ ಫಲಕದಲ್ಲಿ ಕಾಣಿಸಿದೆ. ಆಗ ಅಧ್ಯಕ್ಷರು ಬಾಗಿಲು ತೆರೆದು ಒಳಗೆ ಬರುವುದರೊಳಗೆ ಆ ಚಿತ್ರವು ಮುಗಿದು ಇನ್ನೂ ಹಸಿಯಾಗಿದೆ. ರೇಖಾದೇವಿಯು ಬೇಗ ಬೇಗನೆ ರಾಗಚತುರನನ್ನು ಅನಾಮತ್ತು ಎತ್ತಿಕೊಂಡು ಪರದೆಯ ಒಳಗೆ ಹೋಗಿದ್ದಾಳೆ. ಪರದೆಯ ಹಿಂದಿನ ಮಬ್ಬು ಬೆಳಕಿನಲ್ಲಿ ನೋಡಿದರೆ ರಾಗಚತುರನ ಮೋರೆಯಲ್ಲಿ ಯಾತನೆಯ ಬದಲು ನಿಶ್ಚೇಷ್ಟತೆಯು ಮೂಡುತ್ತ ಇದೆ. ತಕ್ಷಣವೇ ತೊಡೆಯಮೇಲಿಟ್ಟುಕೊಂಡು ಚೂರಿಯನ್ನು ಎಳೆದು ತೆಗೆಯಲು ಪ್ರಯತ್ನಿಸಿದ್ದಾಳೆ. ಆದರೆ ಅದು ಬಲವಾಗಿ ನೆಟ್ಟಿದೆ. ಏನುಮಾಡುವುದಕ್ಕೂ ತೋರಲಿಲ್ಲ. ರೇಖಾದೇವಿಯು ರೋಧಿಸತೊಡಗಿದ್ದಾಳೆ.

ಆ ಧ್ವನಿಯು ರೇಖಾದೇವಿಯದೆಂದು ಎಲ್ಲರೂ ಅರಿತರು. ಏನಾಗಿದೆಯೆಂದು ಯಾರಿಗೂ ತಿಳಿಯಲಿಲ್ಲ.

ಪರದೆಯ ಆಚೆ ಅಧ್ಯಕ್ಷರೂ ಮತ್ತು ಅವರ ಸಂಗಡಿಗರೂ ಯಾತನೆಯ ಆ ಚಿತ್ರವನ್ನು ನೋಡಿ ಅದಕ್ಕೆ ಪದಕವನ್ನು ತೊಡಿಸುವುದರಲ್ಲಿದ್ದರು. "ಕಲೆಗಾಗಿ ಕೊಲೆಯಾಗಿದೆ, ಬೇಗಬನ್ನಿ ಬೇಗಬನ್ನಿ ! ಯಾರಿದ್ದೀರಿ ವೈದ್ಯರು ಯಾರಿದ್ದೀರಿ !" ಎಂದು ರೇಖಾ ಮತ್ತೆ ಮತ್ತೆ ಕೂಗಿಕೊಳ್ಳುತ್ತಿದ್ದಳು. ಆ ರೋದನ ಕೇಳಿದವರೆಲ್ಲ ಅತ್ತಕಡೆ ನುಗ್ಗಿದರು. ಚಿತ್ರಪ್ರದರ್ಶನವು ಯಾರಿಗೂ ಬೇಕಾಗಿರಲಿಲ್ಲ. ಕಲಾವಂತೆಯ ದುಃಖವು ಎಲ್ಲರನ್ನೂ ಸೆಳೆಯಿತು.

ವೈದ್ಯರು ಬಂದು ಚೂರಿಯನ್ನು ತೆಗೆದುನೋಡಿದರು. ಅದರ ತುದಿಯಲ್ಲಿದ್ದ ಬಣ್ಣವು ವಿಷಪೂರಿತವೆಂದೇ ಹೇಳಿದರು. ರಾಗಚತುರನನ್ನು ಏನಾದರೂ ವಿಧಾನದಿಂದ ಬದುಕಿಸುವ ಯತ್ನ ಮಾಡುತ್ತಿದ್ದರು. ಆಗ

ಯಾರೂ ನೋಡದ ಸಮಯದಲ್ಲಿ ವಿಷಪೂರಿತ ಬಣ್ಣದ ಚರಿಯು ರೇಖಾದೇವಿಯನ್ನೂ ಆಹುತಿಯಾಗಿ ತೆಗೆದುಕೊಂಡಿತ್ತು ಎರಡು ಕಲಾಜೀವಗಳು ಒಂದಾಗಿ ಹೊರಟುಹೋಗಿದ್ದವು.

ಹತ್ತು ಲಕ್ಷ ರೂಪಾಯಿಗಳ ಪದಕವನ್ನು ಧರಿಸಿಕೊಂಡವರಾರು? ಭಯದಮೇಲೆ ಯಾತನೆಯನ್ನು ಜೀವಂತವಾಗಿ ತೋರಿಸಲು ಉಳಿದಿತ್ತಲ್ಲವೆ ಆ ಚಿತ್ರಫಲಕ........ಆ ಪದಕವು ಆ ಚಿತ್ರಕ್ಕಲ್ಲದೆ ಮತ್ತಿನ್ನಾರಿಗೆ? ಅಸಾಧ್ಯವಾದುದನ್ನೂ ಚಿತ್ರಿಸಲು ಸಾಧ್ಯವೆಂದು ದಾರಿ ತೋರಿಸುವುದು ಕಲಾವಂತರ ಕೆಲಸ.

ಎರಡು ಆತ್ಮಗಳ ಪ್ರಯತ್ನದ ಫಲವಾದ ಆ ಚಿತ್ರವು ಹಾಗೇ ನಿಂತುಬಿಟ್ಟಿದೆ. ಅದೇ ಆ ಪದಕವನ್ನು ಪಡೆದುಕೊಂಡಿದೆ.

# ೫. ಆವೃತ್ತೀ ಹಳ್ಳಿ

ನೀವೇನೇ ಅನ್ನಿ, ನಾನಂತು ನಮ್ಮವರ ಸಂಗಡ ಇದ್ದಾಗ ಯಾವ ಪುಸ್ತಕವನ್ನೂ ಓದುವುದಿಲ್ಲ—ಮಕ್ಕಳಿದ್ದಲ್ಲಿ ಬಾಲಪ್ರಪಂಚ, ಮತ್ತು ಮನೆಯವರು ಇದ್ದಲ್ಲಿ ಕಾದಂಬರೀ ಸಂಗ್ರಹ!

ಅವರಿರಲಿಲ್ಲ ಆಗ? ಆದುದರಿಂದ ನಾನು ವೇದಾಂತ ಗ್ರಂಥಗಳನ್ನೆಲ್ಲ ಓದಿಬಿಟ್ಟೆ. ಹಿಂದಿನವರು ಹೇಗಿದ್ದರು........ಎನ್ನುವುದನ್ನು ಮನನಮಾಡಿ ಕೊಂಡು, ಈಗಿನ ಹೆಮ್ಮೆಯ ವಿಷಯಗಳನ್ನೆಲ್ಲ ಅದಕ್ಕೆ ತಿಕ್ಕಿ ಒರೆಹಚ್ಚಿ ನೋಡಬೇಕು. ನಮ್ಮ ಹಿರಿಯರೇ ಹೆಚ್ಚು. ಅವರು ಅನುಭವಿಸಿ ಬಿಟ್ಟು ದನ್ನೆಲ್ಲ ಈಗಿನವರು ಚರ್ವಿತ ಚರ್ವಣಮಾಡುತ್ತಾರೆ. ಈರೀತಿ ಧ್ಯಾನದಲ್ಲಿ ದಿನ ರಾತ್ರಿ ಕಳೆಯುವ ಅಭ್ಯಾಸ ನನ್ನದು. ನಿಗಮ ಆಗಮಗಳಲ್ಲಿ ಇಲ್ಲದುದೇ ಇಲ್ಲ........ಆಗ ಆದುದು, ಇದ್ದುದೆಲ್ಲ, ಈಗಲೂ ಆಕಾಶದ ನೆನಪಿನಲ್ಲಾದರೂ ಇದ್ದೇ ಇರಬೇಕು. ಗಾಯಿತ್ರೀಮಂತ್ರ ಹೇಳುವ ರೀತಿಯನ್ನು ಕಲಿಯ ಬೇಕೆಂದು ಶ್ರೀ ವಿವೇಕಾನಂದ ಸ್ವಾಮಿಯವರು ಆತುರ ಪಡುತ್ತ ತಿರುಗುತ್ತ ಇದ್ದರಂತೆ. ಸಿಂಧುನದಿ ತೀರದಲ್ಲಿ ಶ್ರೀ ಸ್ವಾಮಿಯವರಿಗೆ, ಧ್ಯಾನಾಸಕ್ತರಾಗಿ ದ್ದಾಗ ಹಿಂದಿನವರು ಹೇಳುತ್ತಿದ್ದ ಗಾಯತ್ರಿಯ ಧಾಟಿ ಅರಿವಾಯಿತಂತೆ ಹೀಗೆ ಎಂದಾದರೂ ಆದೀತೆ? ಹಿಂದಿನ ವೈಭವ ಕಂಡೇನೇ........ಎಂದು ಆಗ ಆತುರನಾಗಿದ್ದೆ.

ನಾನು ಈಗ ಫೂಡ್ ಡಿಪಾರ್ಟ್‌ಮೆಂಟಿನಲ್ಲಿ ಕ್ಲಾರ್ಕು. ಹಿಂದೊಮ್ಮೆ ನಾನು ಸ್ಕೂಲ್ ಮಾಸ್ಟರಾಗಿದ್ದೆ. ಆಗ ನಡೆದ ನನ್ನ ಅನುಭವವನ್ನು

ತಮ್ಮ, ಪಾಠಕ್ಕೆ ಒಪ್ಪಿಸುತ್ತೇನೆ. ಒಳ್ಳೆ ಅವಕಾಶವನ್ನು ನಾನು ಕಳೆದು ಕೊಂಡೆ ನೀವು ಮಾತ್ರ ಹಾಗೆ ಮಾಡಬೇಡಿ.

ಪಾಠಗಳೆಲ್ಲ ಮುಗಿದು ಪರೀಕ್ಷೆ ಪ್ರಾರಂಭವಾಗಿ, ನಡೆದು, ಮುಗಿವ ದಿನ ನನಗಂತೂ ಪರೀಕ್ಷೆಯಲ್ಲಿ ಕುಳಿತು ಬರೆಯುವ ಬುದ್ಧಿವಂತರನ್ನು ನೋಡಿ ನೋಡಿ ಬೇಸರವಾಗಿತ್ತು. ಅವರು ಬರೆವಾಗ ಅವರ ಮೇಲೆ ಉಸ್ತುವಾರಿ ಇದ್ದು ಕಾಲು ಸವೆದು ಹೋಗಿತ್ತು. ಕೈಸೋತು ಹೋಗಿತ್ತು. ಕಣ್ಣು ಒಣಗಿ ಹೋಗಿತ್ತು. ಆದರೆ ಅದು ವಿಧಿ! ನಿವಾರಿಸಲಾರದುದನ್ನು ಸಹಿಸಲೇಬೇಕು.

ಅಂದು ಕಡೇದಿನ. ಅದೊಂದು ಹಗಲು ಮುಗಿದರೆ ಆವರ್ಷದ ಜ್ಞಾನ ಯಜ್ಞ, ಮುಗಿದಂತೆ, ನನಗೆ ರಜ ದೊರೆತಂತೆ, ಪರೀಕ್ಷೆ ಮುಗಿದ ಮಾರನೆ ದಿನವೇ ಯುಗಾದಿ ಹಬ್ಬ, ಮನೆಯಲ್ಲಿ ಕಾದಿರುತ್ತಾರೆ, ಸಂಜೆ ರೈಲಿಗ ಹೊರಟೇಬಿಡುವುದು.....ಹೀಗೆ ನಿರ್ಧಾರಮಾಡಿಕೊಂಡು ಶತಪಥ ತಿರುಗುತಿದ್ದೆ.

ಸ್ಕೂಲಿನ ದೊಡ್ಡ ನಡುಮನೆ....ಅಲ್ಲಿ ಅರುವತ್ತು ಹುಡುಗರು.... ಬರೆಯುತ್ತ ಕುಳಿತಿದ್ದರು. ಭೌತಶಾಸ್ತ್ರ, ರಸಶಾಸ್ತ್ರ, ಜೀವಶಾಸ್ತ್ರ ಮತ್ತು ಸಸ್ಯಶಾಸ್ತ್ರಗಳ ತಿರುಳೆಲ್ಲ ನನ್ನ ಮುಂದಿನ ಯುವಕ ಯುವತಿಯರ ಮೆದು ಳಿಂದ ಹರಿದು ನರದಲ್ಲಿ ಚೇತನವಾಗಿ ಬೆರಳಲ್ಲಿ ಸ್ಪಂದನವಾಗಿ, ಮುಳ್ಳಲ್ಲಿ ಆಕಾರವಾಗಿ, ಮಸಿಯಲ್ಲಿ ಅಕ್ಷರವಾಗಿ ಕಾಗದದಲ್ಲಿ ಫಲವಾಗಿ ಕಾಣಿಸಿ ಕೊಳ್ಳುವ ರೀತಿಯನ್ನು ಯೋಚಿಸಿ ಯೋಚಿಸಿ ಮುಗ್ಧನಾಗಿದ್ದೆ.

ಮೂರುಗಂಟೆಯಿಂದ ಹಿಂದೆ ಮುಂದೆ ನಡೆದು ನಡೆದು ಸಾಕಾಗಿತ್ತು. ತಲೆ ಎಣಿಸಿ, ಕಡಪಕಲ್ಲು ಎಣಿಸಿ, ಮೇಜು ಎಣಿಸಿ, ಕಾಗದಗಳನ್ನೆಲ್ಲ ಪರೀಕ್ಷಿಸಿ ಸೋತುಹೋಗಿದ್ದೆ. ಯುವಕ ಯುವತಿಯರೆಲ್ಲ ಬರಹ ಯಂತ್ರ ಗಳಾಗಿದ್ದರು. ಅವರು ಲೇಖನಿ ಚಲಾಯಿಸುತ್ತಿದ್ದರು. ನಾನು ಅಧಿಕಾರ ಚಲಾಯಿಸುತ್ತಿದ್ದೆ. ಅವರ ಗತಿಯು ಫಲಿಸಿತ್ತು ನನ್ನ ಗಮನವು ಫಲಿಸಿರ ಲಿಲ್ಲ. ಬೇಸರವಾಗಿ ಆಕಳಿಸಿದೆ, ನೀರು ತರಿಸಿಕುಡಿದೆ, ಕಾಫಿಕುಡಿದೆ, ಕುಳಿತುನೋಡಿದೆ, ಶತಪಥತಿರುಗಿದೆ! ಸುಮಾರು ಎಂಟೊ ಚಿಲ್ಲರೆ ಮೈಲಿ ಹಿಂದೆ ಮುಂದೆ ನಡೆದಿದ್ದೆ. ಬಹು ಬೇಸರವಾಗಿತ್ತು.........

ಆಗ ಇನ್ನೊಂದು ಯೋಚನೆ ಬಂತು. ಈ ಯುವಕ ಯುವತಿಯರ ಪೋಷಾಕು, ಪೆನ್ನು, ಮಸಿ, ಬರಹ, ವಾಚು, ಉಂಗುರ, ಜೋಡು, ಮುಡಿಯ ಹೂ, ಶರಗಿನ ಜರಿ, ಹರಡಿದ ಪರಿಮಳ—ಇವೆಲ್ಲ ಏಕೆ ಜಪ್ತಿ ಮಾಡಬಾರದು ಹಾಗಾದರೂ ಮನೋಹರವಾದೀತು ಈ ದುಃಸಹ ಕರ್ತವ್ಯವನ್ನು ಹೀಗೆ ಪ್ರಾರಂಭಿಸಿದೆ. ವಿದ್ಯಾರ್ಥಿನಿಯರು ಮುಡಿದಿದ್ದ ಹೂವುಗಳನ್ನು ಹೂಗಳಿ ಹೋಗಲು ಬಂದಿದ್ದ ಜೇನುಹುಳುಗಳು ವಿದ್ಯಾರ್ಥಿಗಳಿಗೆ ಹಿಂಸೆ ಕೊಡುತ್ತಿದ್ದವು. ವಿದ್ಯಾರ್ಥಿನಿಯರ ಕೈಬಳೆಗಳ ಸದ್ದು ಅವರ ಚಟುವಟಿಕೆಯನ್ನು ಸೂಚಿಸಿ ವಿದ್ಯಾರ್ಥಿಗಳ ಮನಸೆಳೆಯುತ್ತಿದ್ದವು. ಆದರೆ ಆದಾರು ಅರಸಿಕರು ಟೇಬಲ್ ಕುರ್ಚಿಗಳನ್ನು ಜೋಡಿಸಿದ್ದರೊ ಕಾಣೆ ವಿದ್ಯಾರ್ಥಿನಿಯರ ವದನಾರವಿಂದಗಳೆಲ್ಲ ಗೋಡೆ ಕಡೆಗೆ ಇರುವಂತೆ ಮಾಡಿ ಬಿಟ್ಟಿದ್ದರು. ಪರಸ್ಪರ ನಯನ ಸಮ್ಮೇಳನಕ್ಕೆ ಎಡೆಯೇ ಇರಲಿಲ್ಲ. ನಾನಂತೂ ಅವರಿವರ ಕಷ್ಟ ಸಂದರ್ಭಗಳನ್ನು ಪರಿಶೀಲಿಸುತ್ತ ಒಳಗೊಳಗೇ. ನಗುತ್ತಾ ಪರಿಭ್ರಮಣಮಾಡುತ್ತ ಇದ್ದೆನಷ್ಟೆ. ಆಗ ನನಗೆ ಅನೇಕ ವಿಷಯಗಳು ಮನಸಿಗೆ ಹೊಳೆದವು ಹುಡುಗರೆಲ್ಲ ಕ್ಲೋಸ್‌ಕಾಲರ್ ಬಿಟ್ಟು ಓಪನ್‌ಕಾಲರ್‌ಕೋಟು ಧರಿಸಿದ್ದುದು ಸರಿಯಷ್ಟೆ. ಅದಕ್ಕೆ ಅನೇಕ ಕಾರಣಗಳಿದ್ದವು; ಆದರೆ ಈಗ ಓಪನ್‌ಕಾಲರ್ ಕೋಟುಗಳಿಗೆ ಗುಂಡಿಗಳೇ ಇರಲಿಲ್ಲ. ಅದೂ ಅಲ್ಲದೆ, ಅಂಗಿಗಳೇ ಮಾಯವಾಗಿ ತೆಳುಮಲ್ಲಿನ ಶರಟುಗಳು ಬಂದಿದ್ದವು. ರೇಷನ್ ಶರಟು ಸ್ಟಾಂಡರ್ಡ್ ಪಂಚೆ ಧರಿಸಿದವರೇ ಇರಲಿಲ್ಲ. ಶರಾಯಿ ತೊಟ್ಟವರಾದವರೂ, ಪಠಾಣ್ ಚಪ್ಪಲಿಹಾಕಿದವರೂ, ಲೇಖನಿ, ಪೇನಾ ತಂದವರೂ, ಉಂಗುರ ಕನ್ನಡಕ ಹಾಕಿ ಗಡಿಯಾರ ಕಟ್ಟಿದವರೂ ಕೆಲವರಿದ್ದರು, ಅವೆಲ್ಲ ಲೆಕ್ಕಾಚಾರ ತೆಗೆದುಕೊಳ್ಳುವ ವೇಳೆಗೆ ನನ್ನ ನಿರ್ದಿಷ್ಟ ಮೈಲಿಗಳು ಕೂಡಿಬಂದವು ಹನ್ನೆರಡು ಮೈಲಿಯ ತಿರುಗಾಟವಾದನಂತರ ಎಂದಿನ ನಿಶ್ಚಯದಂತೆ ಗಂಟೆಹೊಡೆಯಿತು. ಹೊಸಬೂಡ್ಸಿನ ಒಳಗೆ ಅಂಗಾಲಲ್ಲಿ ಬೊಬ್ಬೆ ಬಂದಿತ್ತು ತಲೆಯೆಲ್ಲ ನೊಂದಿತ್ತು ಜರತಾರಿ ರುಮಾಲಿನೊಳಗೆ, ವಿದ್ಯಾರ್ಥಿ, ವಿದ್ಯಾರ್ಥಿನಿಯರಿಂದ ಉತ್ತರ ಪತ್ರಿಕೆಗಳನ್ನೆಲ್ಲ ಕಸಿದುಕೊಂಡು, ಜೋಡಿಸಿ, ಎಣಿಸಿ, ಅಧಿಕಾರಿಗಳಿಗೆ ಒಪ್ಪಿಸಿ ನಮಸ್ಕಾರ ಹೊಡೆದು ಬಂದೆ.

ನನ್ನ ಕೋಣೆಯಿಂದ ಹೊರಡಲು ಮುನ್ನ ಮನೆಯಿಂದ ಅಧಿಕಾರ ಯುತವಾಗಿ ಬಂದಿದ್ದ ಪತ್ರದ ನೇಮಕದಂತೆ ಯುಗಾದಿಯ ಪದಾರ್ಥಗಳನ್ನು ಕೊಂಡುಕೊಂಡು ರೈಲ್ವೇಸ್ಟೇಷನ್ ತಲುಪಿ ನಮ್ಮ ಮಾವನೂರಿಗೊಂದು ಟಿಕೀಟು ಕೊಡಿರೆಂದು ನುಗ್ಗಾಡಿ ಟಿಕೆಟ್ಟು ಪಡೆದುದೂ ಆಯಿತು. ರೈಲ ಕಿಟಕಿಯಿಂದ ತೂರಿ ಗಾಡಿಯೊಳಕ್ಕೆ ನನ್ನನ್ನು ನಾನು ತಲುಪಿಸಿಕೊಂಡುದೂ ಆಯಿತು. ಇನ್ನೇನು ಭಯ ಬಿಸಾತಿಲ್ಲ, ನಾಳೆ ಬೆಳಗ್ಗೆ ಊರಪ್ಪೆ! ಎಂದುಕೊಂಡೆ ಆದರೆ ಅಲ್ಲಿ ಪುನಹಾ ತೊಂದರೆ. ಕೂರುವುದಕ್ಕೆ ಜಾಗವಿಲ್ಲ. ನಿಂತು ಎಲ್ಲರ ಮುಖವೋರೆ ನೋಡಿ ಎಣಿಕೆಹಾಕಿದೆ. ವ್ಯಾಖ್ಯಾನ ಮಾಡಿದೆ. ತಲೆತೂಗಿದೆ. ಪರೀಕ್ಷಕನಂತೆ ಎಲ್ಲ ಉದಾಹರಣೆಗಳನ್ನೂ ಮನದಲ್ಲಿ ಮಥಿಸಿದೆ.

ನನ್ನ ರೈಲ್ವೆ ಕಂಪಾರ್ಟ್‌ಮೆಂಟೊಂದರಲ್ಲಿ ಇಡಿಯ ಪ್ರಪಂಚವೇ ಇತ್ತು; ಮತ್ತು ಭೂತ, ವರ್ತಮಾನ, ಭವಿಷ್ಯತ್ತು ಮತ್ತು ಭವಿಷ್ಯತ್ ಘರವೂ ಇತ್ತು. ಹರಪ್ಪನಗರದಿಂದ ಪಾಕೀಸ್ಥಾನ್ ಪುರದವರೆಗೆ ಇತಿಹಾಸ ವದನಗಳನ್ನೆಲ್ಲ ವರಿಸೆ ವರಿಸೆಯಾಗಿ ಜೋಡಿಸಿ ಬಿಡಬಹುದಾಗಿತ್ತು. ಪುರಷಪುರ ಯುದ್ಧದಿಂದ ಕಡೇ ಪಾನಿಪಟ್ಟದವರೆಗಿನ ಸಿಪಾಯ್‌ಸಮರೆಲ್ಲ ಇದ್ದರು, "ಮೈತ್ರೇಯಿ"ಯಿಂದ "ದಂಡಿಯಾತ್ರೆಯ ಕಾರಣಿಕರ"ವರಿಗೆ ಎಲ್ಲಾ ಮಾದರಿಯ ಸ್ತ್ರೀಯರೂ ಇದ್ದರು. ಮಾತು ಮೈ, ಮೋರೆ, ಅಂಗ ಭಂಗಿಗಳೆಲ್ಲ ಅವೇಸರಿ. ಇನ್ನೂ ಭೂಗೋಳವ ತತ್ವಗಳಿಗೆ ಉದಾಹರಣೆಗಳೂ ಇದ್ದವು. ಅತಿಕೃಷ್ಣ, ಅತಿಹಳದಿ, ಅತಿಬಿಳಿಪುಗಳಿನ ವಿಶ್ರೋದಾಹರಣೆಗಳೆಲ್ಲ ಅಳವಟ್ಟಿದ್ದವು. ನನಗೆ ಆಗ ಅನ್ನಿಸಿತು ಹೀಗೆ—ಉಪಾಧ್ಯಾಯವೃತ್ತಿಯೇ ಸರಿ........ಉಪಾಧ್ಯಾಯನು ಹೊರಟನೆಂದರೆ, ಆತನಿಗೆ ಉದಾಹರಣೆಗಳು ಎಲ್ಲೆಂದರಲ್ಲಿ! ಅವನ ಪಾಠ ಕೇಳುವವರೊಬ್ಬರಿದ್ದರೆ ಇಪ್ಪತ್ತುನಾಲ್ಕುಗಂಟೆಯೂ ಹೇಳುತ್ತ ಹೋಗಬಹುದು.....ಅವರೇ ಜನಾಂಗದ ಉದ್ಧಾರಕರು—ಹೀಗೆಲ್ಲ ಯೋಚಿಸುತ್ತ ನಿಂತೆ.

ನಿಂತು ನಿಂತು ಸಾಕಾಯ್ತು. ನನ್ನನ್ನು ಯಾರೂ ಮಾತಾಡಿಸಲಿಲ್ಲ. ಪ್ರಪಂಚದಲ್ಲಿ ಉಪಾಧ್ಯಾಯನೊಂದು ! ವ್ಯಕ್ತಿಯೆ ? ಅವನೊಂದು ನೆರಳು ! ಮಾನವ ಜೀವನದ ಬೆಳಗು ಬೈಗುಗಳಲ್ಲಿ ಮಾತ್ರ ಅವನ ನೆನಪು ಉಪ್ಪಿದ್ದ

ವಾಗಿ ಪ್ರಧಾನವಾಗಿರುವುದು. ಉಳಿದ ಸಮಯದಲ್ಲೆಲ್ಲ ಉಪಾಧ್ಯಾಯನು ಎಲ್ಲ ವಿಚಾರಕ್ಕೂ ಹ್ರಸ್ವ !

ನಿಲ್ಲುವುದು ಸರಿಯಲ್ಲವೆಂದು ಅಡ್ಡ ಹಲಿಗೆ ಏರಿದೆ. ಒಬ್ಬ ಮನುಷ್ಯನಿಗೆ ಎಷ್ಟು ಜಮೀನು ಬೇಕೋ ಅಷ್ಟು ಆವರಿಸಿಕೊಂಡೆ. ಅಡ್ಡಾದೆ. ಒರಗಿದೆ. ಯೋಚಿಸಿದೆ....ಕೆಳಗಿನ ಜನರೆಲ್ಲರ ಮಾತುಗಳೂ, ದೀಪದ ಗಾಜಿನಲ್ಲಿ ಕಾಣುತ್ತಿದ್ದ ಅವರ ಮುಖಗಳೂ, ನನ್ನ ಮನಸ್ಸಿನಲ್ಲಿ ತುಂಬಿಕೊಂಡವು. ಆಗ ನಾನು ಭಾವ ಭಾಷೆ ರೂಪಗಳನ್ನು ಬೇರೆಮಾಡಿಮಾಡಿ ನೋಡುತ್ತ ಹೋದೆ—ಎಲ್ಲ ಮಾತುಗಳ ಮೂಲವನ್ನೂ ಎಲ್ಲ ರೂಪಭೇದಗಳ ಮಾತೃಗಳನ್ನೂ ಬೆದಕುತ್ತ ಹೋದೆ. ಒಂದೊಂದು ಮೋರೆಯನ್ನೂ ಹಿಡಿದು ಹಿಡಿದು ಅದರಲ್ಲಿನ ದ್ರಾವಿಡತ್ವ, ಆರ್ಯತ್ವ, ಹೂಣತ್ವಗಳನ್ನು ಬೇರೆಮಾಡಿ ನೋಡುತ್ತ ಮಲಗಿದೆ.

ನನ್ನ ಸ್ಥಾನದಿಂದ ನಾನು ಯಾವ ಮುಖವನ್ನು ಹೇಗಾದರೂ ಮಾಡಿ ನೋಡಬಹುದಾಗಿತ್ತು. ಹಾಗೇ ವಿಮರ್ಶಿಸಿ ತಿಳಿವು ತುಂಬಿ ಬಂದು, ತಲೆ ಭಾರೈಸಿತ್ತು. ನಿದ್ದೆ ಬಂದುಬಿಡಬಹುದಾಗಿತ್ತು, ಆದರೆ ಬೆಂಚಿನಿಂದಲೂ, ಅದರ ಬುಡದ ಪಾತಳ ಅಂಕಣದಿಂದಲೂ ವಟವಟವಟ ಮಂಡೂಕ ಉಪನಿಶತ್ತೇ ಕೇಳಿಸುತ್ತ ಇದ್ದುದರಿಂದಲೂ, ಕಂಬಿಗಳ ನಡುವಣ ಅಂತರವನ್ನು ದಾಟಿಹೋಗುವ ಗಾಲಿಗಳು "ನಿಗಮಗಮ ಗಮಗಮ, ಆಗಮ ನಿಗಮ ಗಮ ಗಮಗಮ—" ಎಂದು ಹೇಳಿಕೊಳ್ಳುತ್ತ ಇದ್ದುದರಿಂದಲೂ, ಮತ್ತು ದೂರ ನುಂಗಿಕೊಂಡು ಹಾರಿಹೋಗುತ್ತಿದ್ದ ಇಂಜನ್ "ಜಗ್ ಜಗ ಜಗಜಗ—" ಎಂದು ಹಾಡಿಕೊಳ್ಳುತ್ತ ಇದ್ದುದರಿಂದಲೂ ನನಗೆ ನಿದ್ದೆ ಬರಲಿಲ್ಲ. ಬೆನ್ನು ಬುಡದಲ್ಲಿ ರೋಣುಗಲ್ಲು ಉರುಳಿಸಿದಂತೆ ಆಗುತ್ತ ಇತ್ತು. ಅಂಥಾ ಸಂದರ್ಭದಲ್ಲಿ ಇನ್ನೂ ತೀವ್ರವಾಗಿ "ಜನವದನ ಧ್ಯಾನ ಮಾಡುವುದೇ ಸರಿಯೆಂದು ದೀಪದ ಅರ್ಧ ಗುಳೂಪಿನಲ್ಲಿ ಕಾಣುತ್ತಿದ್ದ ಮುಖಗಳನ್ನು ಒಂದಕ್ಕೊಂದು ಕೂಡಿಸುತ್ತ ಕಳೆಯುತ್ತ, ಒಂದರ ಕಣ್ಣು ಇನ್ನೊಂದಕ್ಕೆ ಇಡುತ್ತ, ಒಂದರ ಮೂಗು ಇನ್ನೊಂದಕ್ಕೆ ಅಂಟಿಸುತ್ತ, ಒಂದರ ಬಾಯಿ ಇನ್ನೊಂದರಲ್ಲಿ ಚಿತ್ರಿಸುತ್ತ ಮಲಗಿ ಮೈಮರೆತೆ.

ಎಷ್ಟು ಹೊತ್ತು ಮಲಗಿದ್ದೆನೋ ಕಾಣೆ. ಇದ್ದಕ್ಕಿದ್ದಹಾಗೆ ದಡ್ಡಕ್ ಎಂದು ಟ್ರೈಯಿನ್ ನಿಂತಿತು. ಗಾಡಿಗಳೆಲ್ಲ ಕುಲುಕಿದಂತೆ ಆಗಿಬಿಟ್ಟವು. ಏಕೋ ನಿಂತಿತಲ್ಲ ಎನ್ನುವ ಹೊತ್ತಿಗೆ ಪೋರ್ಟರ್ ಬಾವುಟ ಸುರುಳಿ ಮಾಡುತ್ತ, ಅಧಿಕಾರ ಚಲಾಯಿಸುತ್ತ, ಬಂದು ನಿಂತು, ಬಾಗಿಲು ತೆಗೆದು ಎಲ್ಲರನ್ನೂ ಕೆಳಗೆ ಇಳಿಸಿದ. ನನ್ನ ಕಂಡು ವಿಸ್ಮಯವಾಗಿ ನಕ್ಕು-''ನೀವಾ ಬುದ್ಧಿ ಇಳೀರಿ ನನ್ನೊಡ್ಯಾ! ಇದು ಹಾವುತೀಹಳ್ಳಿ. ನನ್ನ ಇಲ್ಲಿಗೇ ವರ್ಗಾಯಿಸಿದಾರೆ ಬುದ್ಧೀ!"

ನನಗೆ ತಡೆಯಲಾರದಷ್ಟು ರೋಷ. ನಮ್ಮೂರ ಅಗಸನಾದವನು ಕತ್ತೆಯ ಕೈಬಿಟ್ಟು, ಪಾಯಿಂಟ್ ಹಿಡಿದು ನಿಂತಿದಾನಲ್ಲ, ಎಂದು ಒಂದು ಕಡೆ, ಮತ್ತೆ ಇನ್ನೊಂದು ಕಡೆ, ನಡುವೆ ಇಳಿಸಿಬಿಡುತ್ತಾನಲ್ಲ ಎಂಬ ಸಂಕಟ ಬೇರೆ-ಯಾಕೋ, ನಿಂಗಾ! ಇಳಿಸುತ್ತಾ ಇದ್ದೀಯೆ? ಇದ್ಯಾವದೋ ಸ್ಟೇಷನ್? ಎಲ್ಲಿತ್ತೋ ಈ ಹಾಳು ಹಳ್ಳಿ? ಹಾವುತೀ ಅಂತೆ ಹಾವುತೀಹಳ್ಳೀ? ಏನೋ ಇದೆಲ್ಲ ರಂಪ?" ಎಂದು ಒದರಿದೆ.

ಆಗ ಅವನು ಹೀಗೆಂದ—"ಬುದ್ದೀ! ನಿಮ್ಮ ಪಾದದಲ್ಲಿ ರಂಪ ಇಲ್ಲ ಗಿಂಪಾ ಇಲ್ಲ! ಇಂಜೀಣು ಕೆಟ್ಟುಹೋಗಿದೆ ನನ್ನೊಡೆಯ. ಬೇರೆ ಇಂಜೀಣು ಬೆಳಕರೀದೊರಳಗೆ ಬಂದಾತು! ಇಳೀರಿ ನನ್ನೊಡೆಯ; ಹಬ್ಬಕ್ಕೆ ಊರಿಗೆ ಹೋಗಬೈದು; ನನ್ನ ಹಟ್ಟೀಲೆ ಕೂತಿರಿ; ಹೆಂಡ ಕಂಬ್ಳಿ ಮೇಲೆ ಒಂದರಚ್ಚಣ!''

ನನಗೆ ಬಹಳ ಕಿರಿಕಿರಿಯಾಯಿತು. ಇಳಿದು ಹೊರಟೆ. ಶಾಲೊಳಗೆ ಜರತಾರಿ ಪಂಚೆ ಜೋಡಿಸಿ ಹೊದ್ದೆ. ಪ್ಲಾಟ್‌ಫಾರಂನಲ್ಲಿ ಅಡ್ಡಾಡಿದೆ. ಗುಂಪು ಗುಂಪು ಜನ ಅಲ್ಲಲ್ಲೆ ಕುಳಿತಿದ್ದರು. ಹೆಂಗಸರ ಗುಂಪುಗಳಲ್ಲಿ ಗುಸ ಗುಸ, ಗುನಗುನ ನಗುವಿನ ಮಾತು—"ಯುಗಾದಿಹಬ್ಬ ಎಂಥಾ ಚಂದಾ ಯಿತರೀ" ಎಂದು; ಮತ್ತೆ ಗಂಡಸರ ಗುಂಪಿನಲ್ಲಿ ಇಸ್ಪೀಟಿನ ಹಂಬಲ, ಸಿಗರೇಟಿನ ಹೊಗೆ, ಅಟ್ಟಹಾಸದ ನಗು! ಸಣ್ಣ ಹೋಟಲಲ್ಲಿ ಇದ್ದ ತಿಂಡಿಗಳೆಲ್ಲ ಫಡ್ಚ!-ಒಂದು ತಟ್ಟೆ ಉಂಡೆ, ಎರಡು ತಟ್ಟೆ ಆಂಬೊಡೆ, ಒಂದು ಮೊದೆ ದೋಸೆ, ಒಂದು ಹಂಡೆ ಕಾಫಿ, ಸಿಗರೇಟು, ಜಾಡಿಬೀಡಿ, ತರಗೆಲೆ, ಅಡಿಕೆಗಳ ಲೆಕ್ಕವೇ ಇಲ್ಲ. ನಿದ್ರೆ ಓಡಿಸಲಾಗಿಯೂ, ಬೇಸರ ಮರೆಯಲಾಗಿಯೂ

ತಿನ್ನಲು ಕುಳಿತ ಕುಂಭಾಂಡಗಳಿಗೆ ಏನೆಲ್ಲ ಸಾಕಾದೀತು ! ನನಗೆ ಆ ಕೂಟ ಸರಿಬರಲಿಲ್ಲ. ಹಾಗೇ ಹೊರಟೆ ಕಂಬಿ ದಾಟಿದೆ, ಕೈಕಂಭವನ್ನು ತಂತಿಹಿಂದೆ ಹಾಕಿದೆ, ಕಾಲು ಹಾದಿ ಹತ್ತಿ ಭಾಟಾ ಮಾರ್ಗ ಹಿಡಿದೆ.

ಗಂಟೆ ಗೊತ್ತಾಗಲಿಲ್ಲ. ಇನ್ನೇನು ಮಾಡಲಿ ? ಪೋರ್ಟರ್ ನಿಂಗನ ಮನೆಯಲ್ಲಿ ಕಂಬಳಿ ಮೇಲೆ ಕುಳಿತಿರಲು ಬದಲಾಗಿ ಹಾಗೇ ಅಡ್ಡಾಡಿ ಬರೋಣೆಂದು ಹೊರಟೆ. ಜೊತೆಗೆ ಯಾರೋ ಕೆಲವರು ಬಂದು ಸಂಗಡ ಹೆಜ್ಜೆ ಹಾಕಿದವರು—" ಎಲ್ಲೀವರಿಗೆ ದೇವರೂ ?"-ಕೇಳಿದವರು ಯಾರೋ ಅರ್ಥವಾಗಲಿಲ್ಲ ಆದರೂ ಹೇಳಿದೆ, ಅಶ್ರದ್ಧೆಯಿಂದ—"ಹೀಗೇ ಹೊರಟೆ. ಇನ್ನೇನು ಮಾಡೋಣ, ಬೇರೆ ಇಂಜನ್ ಬರೋವರಿಗೆ ಕಾದಿರಬೇಕಲ್ಲವೆ ?'' ಎಂದೆ. ನಾನು ಸರಾಗವಾಗಿ ಸಲುಗೆ ವಹಿಸಲಿಲ್ಲ. ಅದುದರಿಂದ ಆತನು ಹಾಗೇ ಮುಂದೆ ಮುಂದೆ ಹೊರಟೇ ಹೋದನು. ಅನಂತರ ಇನ್ನೊಂದು ಹಳ್ಳಿಯ ತಂಡವು ಬಂದಿತು. ಅವರು ಕುತೂಹಲದಿಂದ ಕೇಳಿದರು—'' ಸಾಮಿ ! ಎಲ್ಲಿಗಾ ? ವೇದಗುಡ್ಡಕ್ಕೆ ಹೊರಟಾಂಗಿದೆ ದೇವರು ! ಈಟೊತ್ತಿನಲ್ಲಿ ಹೊರಟರಾ ಬುದ್ದಿ ?"

ಇವರ ಮಾತಿಗೆ ಸೆಡೆತುಕೊಂಡು ಇರಲಾರದೆ ನಾನು ಮಾತಾಡಿದೆ ಹೀಗೆ—" ಏನ್ರಪ್ಪಾ ! ಎದುರಿಲ್ಲಿರೋದೇನ್ರಪ್ಪಾ ? ಈ ಹಾದಿ ಎಲ್ಲಿಗೆ ಹೋಗುತ್ತೆ ? ಸ್ವಲ್ಪ ದೂರ ಈ ಬೆಳದಿಂಗಳಲ್ಲಿ ಹೋಗಿ ಬರೋಣಾಂತ ಹೊರಟೆ ನೋಡಿ. ಹೋಗೋಣವೆ ?"

ಆವರ ನಡುವೆ ಒಬ್ಬ ಹೇಳಿದ—"ಹೋಗಬೈದು ಬುದ್ಧೀ ! ಹೋಗದೇ ಏನಾ ? ನೇರ ಹೋಗಿ ನೇರ ಬನ್ನಿ ಗುಂಯ್ಯೆ ಒಳಗೆ ಹೋಗಬೇಡಿ....ಆದರೆ ಆ ನಿಂಗಂಗುಂಯ್ಯೆ ಒಳಗೆ ಹೋಗಬಾರದು."

" ಅದೇಕೆ ? ಅಲ್ಲೇನಿವೆ ? ಕತ್ತಲಾಗಿದ್ದರೆ ಹೋಗೋದು ಹೇಗೆ ?''

" ಕತ್ತಲೇ ಇಲ್ಲ ಬುದ್ದಿ, ಅಲ್ಲಿ ಜೋತಿ ಹತ್ತಿಕ್ಕಿದಹಾಗೇ ಇರುತ್ತೆ ಎಲ್ಲ ಒಂದೊಂದು ಬಾರಿ ! ಎನ್ರಪ್ಪಾ! ಇವರನ್ನ ಕೇಳಿ ಬೇಕಾದ್ರೆ ಒಂದೊಂದು ಸಲಾ ಅದೇನೋ ಎತ್ತ್ಗೋ, ಬೆಳಂಬೆಳಕೇ ಹೋಗಿ ಕತ್ತಲ ಕಾವಳ ಆಗತ್ತೆ. ಏನೇ ಆಗಲಿ, ಹೊಸಬರು ಆಚೋರಿ ಹೋಗಬೇಡಿ ನನ್ನೊಡೆಯಾ. ಎಡ ಚೋರೀಕ್ಕೇ ಹೋಗಿ ಇದೇ ರಸ್ತೆ ಕೂಡಿಕೊಳ್ಳಿ ಬೇಗ ಟೇಷನ್ ತಾವಕೇ ಬಂದುಬಿಡೀವ್ರಿ ''

ಆ ಮಾತಿಗೆ ಒಪ್ಪಿ ಹೊರಟೆ. ಸ್ವಲ್ಪ ಹತ್ತಿ, ಬಹಳ ಇಳಿದು, ಮತ್ತೆ ಹತ್ತಿಹೋಗಿ, ಇಳುಕಲಲ್ಲಿ ಜಾರಿ ಜಾರಿ ಹೋದೆ. ಯಾವುದೋ ಬಾಗಿಲಲ್ಲಿ ಹೊಕ್ಕೆ. ಆ ಹಳ್ಳಿಯವನ ಆ ಮಾತೆಲ್ಲ ನೆನೆಪಿಗೆ ಬಂದು ಅಡ್ಡಹಾಕಿದರೂ, ಓದಿದವನಾದ ನಾನು-''ಭಯಾನಾಂ ಭಯಂ, ಭೀಷಣಾನಾಂ ಭೀಷಣಂ-" ಎಂದು ನುಗ್ಗಿದೆ.

ಸುಮಾರು ದೂರ ಹೋದ ಮೇಲೆ ಬೆಳಕಾಯಿತು. ಒಂದಲ್ಲ ಜೋತಿ!—ಗೋಡೆಯ ಅರಿಗಿನಲ್ಲಿ ಕೆಳಗೆ ಮೇಲೆಲ್ಲ ಬೆಳಕು ಮೂಡಿ ಮುಳು ಗುತ್ತ ಇದ್ದವು. ಆಗ ನಾನು ಸ್ವಲ್ಪ ಹೆದರಿದವನಾಗಿ "ತ್ವಮೇಕಂ ಶರಣ್ಯಂ, ತ್ವಮೇಕಂ ವರೇಣ್ಯಂ'' ಎಂದುಕೊಂಡು ಎರಡು ನಿಮಿಷ ಮುಂದೆ ನುಗ್ಗಿದೆ. ಆಗ ಅದೆಲ್ಲೋ ಒಳಗಿನಿಂದ—"ತ್ವಮೇಕಂ ಜಗತ್‌ಪಾಲಕಂ ಸ್ವಪ್ರಕಾಶಂ—" ಎಂದು ಧ್ವನಿ ಅಖಲಿತವಾಗಿ ಕೇಳಿಬಂತು. ಇನ್ನೂ ಮುಂದೆ ಹೊರಟೆ. ಅಲ್ಲಿಂದ ಕೆಳಗೆ ಸ್ವಚ್ಛ ಬಿಳಿಗಲ್ಲಿನ ಮೆಟ್ಟಿಗೆ ಕಾಣಿಸಿತು. ಅಲ್ಲಿ ನಿಂತೆ.

ಎಲ್ಲೋ ಒಳಗೆ ಅಂತರಾಳದಿಂದ ಧ್ವನಿ ಕೇಳಬಂತು.

ಓಂ ದ್ಯೌಃ ಶಾಂತಿಃ ಅಂತರಿಕ್ಷಂ ಶಾಂತಿಃ
ಪೃಥ್ವೀ ಶಾಂತಿಃ ಆಪಃ ಶಾಂತಿಃ
ಓಷಧಯಃ ಶಾಂತಿಃ ವನಸ್ಪತಯಃ ಶಾಂತಿಃ
ವಿಶ್ವೇದೇವಾಃ ಶಾಂತಿಃ ಬ್ರಹ್ಮಾಃ ಶಾಂತಿಃ
ಸರ್ವಂ ಶಾಂತಿಃ ಶಾಂತಿರೇವಶಾಂತಿಃ

ಸಾಮಾ ಶಾಂತಿ ರೇ ಧೀ(((:—ಎಂದು ನೂರು ಬಾರಿ ಪ್ರತಿಧ್ವನಿ ತವಾಗಿ ಕೇಳಿಸಿತು. ಧೈರ್ಯಮಾಡಿ ಮೆಟ್ಟಲು ಇಳಿದು ಹೊರಟೆ. ಒಂದು ನಡುಮನೆಗೆ ಬಂದೆ. ಅಲ್ಲೊಬ್ಬ ನೀಳದೇಹಿಯಾಗಿ, ಕಾಷಾಯವಸ್ತ್ರಧಾರಿ ಯಾಗಿ, ಹೊಳೆ ಮೊಗದಸಣ್ಣವನೊಬ್ಬ ವ್ಯಕ್ತಿಯು ಮಾತನಾಡಿಸ ಬಂದನು.

ನಾನು ನಮಸ್ಕಾರ ಮಾಡಿ ಹೀಗೆ ವಿಚಾರಿಸಿದೆನು—"ಸ್ವಾಮಿಾ, ನಾನು ಬಂದುದು ತಮಗೆ ತೊಂದರೆಯಾಯ್ತೇನೋ ಕಾಣೆ. ರೈಲು ಕೆಟ್ಟು ನಿಂತಿತು. ಸ್ವಲ್ಪ ಕಾಲ ಕಳೆಯಲಾಗಿ ಹೀಗೆ ಅವುತೀಹಳ್ಳಿಯಿಂದ ಹಾದಿ

ಹಿಡಿದು ಬಂದೆ. ಇದೇನು ಗುಹೆ. ಇದರಲ್ಲಿ ಯಾರಿದ್ದಾರೆ? ಸ್ವಲ್ಪ ವಿಚಾರ ತಿಳಿಸಿರಿ.''

ಆ ಸನ್ಯಾಸಿಯು ನನ್ನನ್ನು ತನ್ನ ಸಂಗಡ ಕರೆದೊಯ್ದನು. ಗುಹಾಂತರದಲ್ಲಿ ಹಾಗೇ ಹೊರಟೆವು. ಅದೆಲ್ಲಿ ಬೆಳಕು ಬರುತ್ತಿತ್ತೊ ಕಾಣೆ. ಎಡವದೆ ಮುಗ್ಗರಿಸದೆ, ತಡವರಿಸದೆ, ಒಂದು ಕಡೆಯಿಂದ ಇನ್ನೊಂದು ಕಡೆಗೆ, ಬಣ್ಣ ಬಣ್ಣದ ಕಲ್ಲಿನ ಕೋಣೆಗಳನ್ನು ದಾಟಿ ಬಂದೆವು. ಅಲ್ಲೊಂದು ಕಡೆ ಇನ್ನೊಬ್ಬ ಸನ್ಯಾಸಿ ಕುಳಿತಿದ್ದನು. ಆತನು ಮೃದುವಾಗಿ ನಕ್ಕು ನನ್ನ ಕರೆದು ಹೀಗೆಂದನು—" ನೀವು ನಿಮ್ಮ ಚರಿತ್ರೆ ಮತ್ತು ಜೀವನ ಧ್ಯೇಯಗಳನ್ನು ವಿಷದವಾಗಿ ಮತ್ತು ಸತ್ಯವಾಗಿ ನಮಗೆ ಈಗ ತಿಳಿಸಬೇಕು. ಅಲ್ಲಿ ಆ ಬಳಿ ನಿಂತು ಹೇಳಿರಿ "-ಎಂದನು ಗೋಡೆಯ ಬಳಿ ಅದೇನೋ ಒಂದು ಬಗೆ ಯಂತ್ರವಿತ್ತು. ಶಬ್ದಗ್ರಹಣಯಂತ್ರವಿರಬಹುದೆಂದು ಅವರ ಮುಂದೆ ನಾನು ನನ್ನ ಜೀವನ ಚರಿತ್ರೆಯೆಲ್ಲ ಹೇಳಿಕೊಂಡೆ. ಆಕಾಶವಾಣಿ ಕಾರ್ಯಾಲಯವೋ ಇದು ಎಂದು ಭ್ರಾಂತಿಯಾಯಿತು. ಆದರೆ ಅಂಥುದೇನಲ್ಲವೆಂದು ಪ್ರತಿಕ್ಷಣವೇ ವ್ಯಕ್ತವೂ ಆಯಿತು.

ಇನ್ನೊಂದು ಶಿಲಾಗೃಹದಿಂದ ಇನ್ನೊಬ್ಬ ವ್ಯಕ್ತಿ ಬಂದು—" ಬನ್ನಿ ಓದಿಕೊಳ್ಳಿ ನೀವು ಹೇಳಿದುದೆಲ್ಲ ಇಲ್ಲಿ ಸರಿಯಾಗಿದೆಯೇನು? ಇದು ಕನ್ನಡ ಪ್ರತಿ, ಇದು ವಿಶ್ವವಾಚೀ ಪ್ರತಿ. ಇವೆರಡಕ್ಕೂ ಸಹಿಮಾಡಿರಿ. ಈ ವಿಷಯವೇನೊಂದನ್ನೂ ಹೊರ ಪ್ರಪಂಚಕ್ಕೆ ಹೇಳುವುದಿಲ್ಲ—ಎಂದು ಬರೆಯಿರಿ." ಹೀಗೆಂದು ಆತ ಮುಂದೊಡ್ಡಿದ ಎರಡು ಬರಹಗಳಿಗೂ ಸಹಿಮಾಡಿದೆ. ಅವೆರಡೂ ಯಂತ್ರಕೃತಪ್ರತಿಗಳು. ಅನಂತರ ಇನ್ನೊಂದು ಸುರಂಗದ ಹಾದಿಯಲ್ಲಿ ನಿಂತು ಯಾರೋ ಕರೆದರು. ಆತನ ಹಿಂದೆ ಹೋಗುತ್ತ ವಿಚಾರಿಸಿದೆ—'' ಗಂಟೆ ಈಗ ಎಷ್ಟು? ನಾನು ರೈಲಿಗೆ ಹೋಗುವವನು. ನನಗೆ ಗುಹೆಯಿಂದ ಹೊರಗೆ ಹೋಗುವ ಹಾದಿ ತೋರಿಸುವಿರಾ?"

ಆತನು ನಗುತ್ತ ಹೇಳಿದ್ದೇನೆಂದರೆ—" ಸ್ವಾಮಿ ನಿಮ್ಮಂತವರು ಇಲ್ಲಿಗೆ ಬಂದು ಎಲ್ಲ ಶೋಧನೆಮಾಡಿ ತಿಳಿದುಕೊಳ್ಳದೆ ಹೋಗುತ್ತಾರೆಯೆ? ನಮ್ಮ ಗಂಟೆ ನಿಮ್ಮ ಸ್ಟಾಂಡರ್ಡ್ ಟೈಂ ಅಲ್ಲ. ನಾವು ವೇದಕಾಲಾನುಸಾರವಾಗಿ ನಿಗಮ ಘಳಿಗೆಗಳನ್ನು ಎಣಿಸುವವರು. ಅಲ್ಲೊಂದು ಘಟಿಕಯಂತ್ರವಿದೆ

ನೋಡಿರಿ ಅರ್ಥವಾಗದಿದ್ದರೆ ದೊಡ್ಡವರನ್ನು ಕೇಳಬೇಕು. ಅವರು ಇದ್ದಲ್ಲಿ ಎಲ್ಲಾ ಬಗೆ ಯಂತ್ರಗಳೂ ಇರುತ್ತವೆ. ಹೀಗೆಂದು ಹೇಳಿ ಇನ್ನೊಂದು ಕಡೆಗೆ ಕರೆದೊಯ್ದನು. ಅಲ್ಲಿ ಅನೇಕ ಬಗಯ ಗಿಡಗಳಿದ್ದವು. ಹರಿವ ನೀರಿನ ಶಬ್ದವಿತ್ತು. ನೀಲ ಆಗಸವೂ ಇತ್ತು. ತಾರೆಗಳಿದ್ದರೂ ಚಂದ್ರನೇ ಕಾಣಿಸಲಿಲ್ಲ. ನನಗೆ ಚಂದ್ರ ಮುಳುಗಿದ್ದರೆ ರೈಲಿಗೆ ಹೊತ್ತಾದೀತೆಂಬೂ ಭಯವಿತ್ತು. ಆದರೆ ಚಂದ್ರನೆಲ್ಲಿರಬೇಕು ಯುಗಾದಿ ಮೂರನೆ ದಿನವಾದರೆ ಚಂದ್ರನಿರಬಹುದೇನು—ಇವೇ ಮೊದಲಾಗಿ ಪ್ರಶ್ನೆಗಳು ಉತ್ತರವೇ ಕಾಣದೆ ಲಯವಾದವು.

ಅಲ್ಲಿ ಅನೇಕರು ತಿರುಗಾಡುತ್ತಿದ್ದರು. ಕೆಲವರು ಕುಳಿತಿದ್ದರು. ನಾನು ಯಾರ ಸಂಗಡಲೂ ಮಾತಾಡಿ ಗೆಳೆತನ ಸಂಪಾದಿಸಿಕೊಳ್ಳುವ ಸಮಯವೂ ಇರಲಿಲ್ಲ. ನನ್ನ ಕರೆತಂದವನೊಡನೆ ನಾನು ಮಾತಾಡುತ್ತಿದ್ದೆ.

ಅದಕ್ಕೆ-ನಿಗಮಗುಹಾ, ನಿಗಮಶಿಲಾ-ಎಂದು ಹೆಸರು. ಅಲ್ಲಿ ಅನೇಕ ಗುಹಾಂತರ ಪ್ರದೇಶಗಳು. ಒಂದೊಂದರಲ್ಲಿ ಒಂದೊಂದು ಬಗೆ ಶಾಸ್ತ್ರಸಂಬಂಧ ಪ್ರಯೋಗಗಳು ನಡೆದಿದ್ದವು. ಅವಕ್ಕೆಲ್ಲ ಮೂಲಾಧಾರವು ಒಂದು ಜ್ವಾಲಾಮುಖಿ ಅದರ ಶಕ್ತಿಯಿಂದ ಬೆಳಕು ಮತ್ತು ವಿದ್ಯುತ್ ಶಕ್ತಿಗಳು ಒದಗಿದ್ದವು. ಅನೇಕರು ಅಲ್ಲಿಗೆ ಬಂದು ಹೋಗುತ್ತಿದ್ದರು. ಅವರೆಲ್ಲ ಯಾವ ದೇಶದವರೋ ಅರಿವಾಗದು. ಅವರ ಆಹಾರ ವ್ಯವಹಾರಗಳೂ ವ್ಯಕ್ತವಾಗದು. ಅವ್ಯಕ್ತವಾದ ಅನೇಕ ಗುಹ್ಯಗಳು ಅಲ್ಲಿದ್ದವು. ನಿಗಮ ಗುಹಾ ಪ್ರದೇಶಕ್ಕೆ ಪ್ರಧಾನರಾಗಿ ಒಬ್ಬರು ಮಹಾ ವ್ಯಕ್ತಿ ಇದ್ದಾರೆ. ಅವರ ಅಪ್ಪಣೆಯಂತೆ ಎಲ್ಲವೂ ನಡೆಯುವುದು. ಅವರೇ ಎಲ್ಲವನ್ನೂ ಅರಿತು ಎಲ್ಲವನ್ನೂ ಪ್ರಯೋಗಿಸಿ ನೋಡುವವರು. ಅವರು ಯಾವ ಘಳಿಗೆ ಎಲ್ಲಿರುವರೋ ನಮಗೆ ತಿಳಿಯದು—ಅವರು ಅಷ್ಟಸಿದ್ಧಿಗಳನ್ನು ಪಡೆದವರು.

ಈ ವೇಳೆಗೆ ಶಂಖಧ್ವನಿಯಾಯಿತು. ಎಲ್ಲೆಲ್ಲಿಂದಲೋ ಸಮವೇತ ಉಪಾಸನಾ ಮಂತ್ರ ಕೇಳಿ ಬಂತು.

ಅಸತೋ ಮಾ ಸದ್ಗಮಯ
ತಮಸೋಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಮಮೃತಂಗಮಯ

ಈ ಮಂತ್ರ ಎಲ್ಲಿಂದ ಹೊರಟಿತೋ ಗೊತ್ತಾಗಲಿಲ್ಲ. ಅಲ್ಲಿದ್ದವರೆಲ್ಲ ಆ ಮಂತ್ರ ಅನುಸರಿಸಿ ಹೇಳಿದರು. ನಾನೂ ಅವರ ಸಂಗಡ ಹೇಳಿದೆ. ಅನಂತರ, ಅಲ್ಲಿಂದ ಎಲ್ಲರೂ ಹೊರಟರು, ನಾನೂ ಹೊರಟೆ. ಯಾವುದೋ ಗುಹಾಂತರ ಮಾರ್ಗ.

ಕ್ರಮಶಃ ಎಲ್ಲರೂ ಎಲ್ಲೆಲ್ಲಿಯೋ ತಿರುಗಿಕೊಂಡು ಹೊರಟರು. ನಾನೊಬ್ಬನೇ ಬೇರೆ ಹೊರಟೆ. ನನ್ನ ಸಂಗಡ ಯಾರೂ ಇರಲಿಲ್ಲ. ಒಬ್ಬನೇ ಆದೆನಲ್ಲ ಎಂದು ಹಿಂದೆ ಮುಂದೆ ನೋಡುತಿದ್ದಾಗ ಯಾರೋ ಕೈ ಬೀಸಿ ಕರೆದರು. ಅತ್ತಕಡೆ ಹೊರಟೆ.

ನಾನು ಪ್ರವೇಶಿಸಿದ ಶಿಲಾಗೃಹವು ಉದ್ದುದ್ದವಾಗಿತ್ತು. ಅದನ್ನು ಅಲ್ಲಿಗಲ್ಲಿಗೆ ವಿಭಾಗಿಸಿದ್ದರು. ತರ ಥರ ವರ್ಣಗಳ ಶಿಲೆಗಳು ನಡುನಡುವೆ ಭದ್ರವಾಗಿ ನಿಂತಿದ್ದವು. ಅಲ್ಲಿಗಲ್ಲಿಗೆ ಬೆಳ್ಳಿ ಬಂಗಾರ ಮೊದಲಾದ ಲೋಹಗಳ ಚೌಕಟ್ಟುಗಳಲ್ಲಿ ಪಾರದರ್ಶಕ ಹಲಗೆಗಳಿದ್ದವು. ಬಾಗಿಲುಗಳೆಲ್ಲ ಗಾಜಿನ ಬಾಗಿಲುಗಳಂತೆ ಇದ್ದುವು. ಅಲ್ಲಲ್ಲಿ ಉದ್ದುದ್ದ ಕೀಲುಗಳಿದ್ದವು. ಆ ಕೀಲುಗಳ ತುದಿಗೆ ದುಂಡು ಬಿಲ್ಲೆಗಳಿದ್ದವು. ಅವುಗಳ ಮೇಲೆಲ್ಲ ಏನೇನೋ ಬಂಗಾರದ ಅಕ್ಷರಗಳಿದ್ದುವು. ಕಲ್ಲು ಹಲಗೆಗಳ ಹಿಂದೆ ತಂತಿಗಳು, ಕುಂಚಗಳು ಚಕ್ರಗಳು ಶೀಶೆಗಳು ಜೋಡಿಯಾಗಿ ಅಲಂಕಾರವಾಗಿ ಕಂಡವು. ಅವುಗಳೆಲ್ಲ ಸಚೇತನವಾದುದನ್ನು ನೋಡಲು ನನಗಾಸೆ ಬಂತು. ನನ್ನ ಆಸೆಯನ್ನು ಅರಿತವನಂತೆ ಅಲ್ಲಿನ ವ್ಯಕ್ತಿಯು ನನಗೆ ಅರ್ಥವಾಗುವ ಭಾವಭಂಗಿಯುತ ಭಾಷೆಯಲ್ಲಿ ನನ್ನನ್ನು ಕರೆದೊಯ್ದು ವಿವರಿಸಿದನು. ನಾನು ಇವನ್ನೆಲ್ಲ ನೋಡುತ್ತನಿಂತೆ.

ಮೊದಲನೆಯದು ಲೋಹಗಳನ್ನು ಶುದ್ಧಿಗೊಳಿಸುವ ಸ್ಫುಟಯಂತ್ರ. ನನ್ನ ಸಂಗಡಿಗನು ಗಾಢಸ್ನೇಹಭಾವವನ್ನುಬೀರಿದ್ದರಿಂದ ನಾನು ಆತನೊಡನೆ ಅತ್ಯಂತ ಸಲುಗೆಯಿಂದ ವರ್ತಿಸುವಂತಾಯಿತು. ಆದುದರಿಂದ ಮೊದಲನೆ ಯಂತ್ರದ ಬಳಿ ನಾನು ನನ್ನ ಉಂಗುರವನ್ನು ಶುದ್ಧಿಮಾಡುವ ಆಸೆ ಬೀರಿದೆ. ಆಗ ಆ ವ್ಯಕ್ತಿಯು ಮೊದಲು ನನ್ನ ಉಂಗುರದ ಆಕಾರವನ್ನು ಒಂದು ಕಡೆ ಅಚ್ಚು ತೆಗೆದು ಬಂಗಾರವನ್ನು ಪುಟಕ್ಕಿಟ್ಟನು. ಅದು ಯಂತ್ರದ ಒಳಕ್ಕೆ ಹೋದ ಮೇಲೆ ನನಗೆ ನೆನಪು ಬಂತು. ಅದರಲ್ಲಿ ನನ್ನಾಕೆಯ ವಿಳಾಸದ

ಪಚ್ಚೆಯಿತ್ತೆಂದು. ನನ್ನ ನೆನಹಿನ ಸಮಯಕ್ಕೆ ಸರಿಯಾಗಿ ಯಂತ್ರ ನಿಂತಿತು. ಪಚ್ಚೆ ಹೊರಕ್ಕೆ ಬಂದು ತಟ್ಟೆಯಲ್ಲಿ ಬಿದ್ದಿತು. ನನ್ನ ಸಂಗಡಿಗನು ಆ ಪಚ್ಚೆಯನ್ನು ಅಚ್ಚಿನಲ್ಲಿಟ್ಟನು. ಆವೇಳೆಗೆ ಬಂಗಾರ ಬಂದು ಸುರಿದು ಉಂಗುರ ಪಚ್ಚೆ ಮುದ್ರಿಕೆ ಸಮೇತ ಹೊರಗೆಬಂತು. ಅನಂತರ ಶಿಲಾ ಶೋಧನ ಯಂತ್ರವನ್ನು ನೋಡಿ, ಮುಂದೆ ಸಸ್ಯ ಶೋಧನ ಯಂತ್ರಕ್ಕೆ ಎದುರಾದಾಗ ನನಗಂತೂ ಇನ್ನೊಂದಾಶೆ ಮೂಡಿತು. ನನ್ನ ಹೊದಿಕೆ ಬಟ್ಟೆಯನ್ನೇನಾದರೂ ಪ್ರಯೋಗಕ್ಕೆ ಇಟ್ಟರೆ ಸಂಗಡ ತೆಗೆದೊಯ್ಯಲು ಅನುಕೂಲವೆಂದು ಯೋಚಿಸಿದೆ, ಸಂಗಡಿಗನು ನಿವಾರಿಸುವ ಮೊದಲೆ ಕೋಣೆಯೊಳಕ್ಕೆ ಅದನ್ನು ಎಸೆದು ಬಾಗಿಲಿಕ್ಕಿದೆ.

ನಾನು ಹೊದೆದು ಕೊಂಡಿದ್ದಿದು ಮಿಶ್ರ ಪದಾರ್ಥ-ಹತ್ತಿಯ ಪಂಚೆ ; ಬಂಗಾರ ಸಾಚಾಜರತಾರಿ, ಮತ್ತು ಉಣ್ಣೆಯ ಶಾಲು ಮತ್ತು ರೇಶ್ಮೆಯ ಮಿಶ್ರ ಮುಂತಾದುದು. ಆದುದರಿಂದ ಉಣ್ಣೆ, ರೇಶ್ಮೆ, ಬಂಗಾರಗಳು ಕೂದಲು ಕೂದಲಾಗಿ ನಿಂತು ಹತ್ತಿಯ ಪಂಚೆಗೆ ವಿಚಿತ್ರರೀತಿಯ ತುಪ್ಪಳದಂತಾಗಿ ಹೊಸ ಮಾದರಿ ಹೊದಿಕೆಯಾಯಿತು. ಅಲ್ಲಿಂದ ಮುಂದೆ ಪ್ರಾಣಿ ಸಂಬಂಧದ ಸಂಗ್ರಹದ ಬಳಿಗೆ ಹೋದೆವು. ನನ್ನ ಹೊದಿಕೆಯ ರೀತಿ ನೋಡಿ, ನನಗೆ ಆಗ ನನ್ನ ನಾಯಿ ಟಾಮಿಯ ನೆನಪು ಬಂತು. ಅದಕ್ಕೆ ಕೂದಲೇ ಉದುರಿಹೋಗಿತ್ತು. ಹೊಸ ಪ್ರಯೋಗದ ಮೂಲಕ ಅದಕ್ಕೆ ಕೂದಲು ಬರುವಂತಿದ್ದರೆ, ಏಕೆ ಪ್ರಯತ್ನ ಪಡಬಾರದು ಎಂದು ಯೋಚಿಸುತ್ತಿದ್ದೆ.

ಆವೇಳೆಗೆ ನನ್ನ ಗೆಳೆಯನು ಮುಂದೆ ಹೋಗಿದ್ದನಾಗಿದ್ದರಿಂದ ನಡುವೆ ಕೆಲವೆಲ್ಲ ಪ್ರಯೋಗಮಂದಿರಗಳನ್ನು ನೋಡದೆ ಹೋಗಬೇಕಾಯಿತು. ಆತನು ಒಂದೆಡೆಯಲ್ಲಿ ನಿಂತನು. ನಾನು ಅಲ್ಲಿ ಹೋದಮೇಲೆ ಆತನು ಹೀಗೆನ್ನುತ್ತ ನಗೆ ಬೀರಿದನು—"ಏನಿರಪ್ಪ, ಇದು ನೋಡಿರಿ ಈ ಯಂತ್ರ! ಇದು ಮಾನವ ದೇಹವನ್ನೇ ಮಾರ್ಪಡಿಸುವ ಯಂತ್ರ. ದೇಹವನ್ನು ಮೂಲರೂಪದವರೆಗೆ ಶೋಧಿಸಿ, ವಿಭಜಿಸಿ, ಸಾಲದ ಪೋಷಕ ಪದಾರ್ಥಗಳನ್ನೆಲ್ಲ ಕೂಡಿಸಿಕೊಟ್ಟು ಹೊಸ ರೂಪಕ್ಕೆ ತರುವುದು. ಇದರಲ್ಲಿ ಏನಾದರೂ ಪರೀಕ್ಷೆಮಾಡಿಕೊಂಡು ನೋಡುವಿರಾ ?"

ನಾನು ಅವಸರದಲ್ಲಿ ನುಗ್ಗಿ ಬಿಡುವ ಸ್ವಭಾವದವನು. ಅವನ ನಗುವಿನ ತೀಕ್ಷ್ಣತೆಯನ್ನು ತಡೆಯಲಾರದೆ "ಹೂ ಆಗಲಿ!'' ಎಂದೆ. ಆಗ ಸಂಗಡಿಗನು ಹೀಗೆ ಎಚ್ಚರಿಕೆ ಕೊಟ್ಟನು—'' ಈ ಚಿತ್ರ ನೋಡಿರಿ, ಇದು ಮಿಶ್ರ ಕುಲದ ಚಿತ್ರ. ಈ ಚಿತ್ರ ನೋಡಿರಿ. ಇದು ಶುದ್ಧ ಆರ್ಯರೂಪ. ಇದು ಶುದ್ಧ ದ್ರಾವಿಡರೂಪ. ಇವು ಇತರ ಮಿಶ್ರರೂಪಗಳು. ನಿಮ್ಮ ಚಿತ್ರ ತೆಗೆದುಕೊಡುತ್ತೇನೆ. ಅದರಲ್ಲಿ ದ್ರಾವಿಡ, ಆರ್ಯ, ಮಿಶ್ರರೂಪಗಳನ್ನು ತೆಗೆದೂ ತೋರಿಸುತ್ತೇನೆ. ಯಾವರೂಪ ಬೇಕಾದರೂ ಅದಕ್ಕೆ ನಿಮ್ಮ ದೇಹದ ಅಚ್ಚನ್ನು ನಿಲ್ಲಿಸಬಹುದು ಮೊದಲಿಗೆ ನನ್ನದೇ ಆ ರೂಪ, ನನ್ನದೇ ಈ ರೂಪ." ಎಂದಕೂಡಲೆ ಆತನ ಕಡೆಗೆ ನೋಡಿದೆನು.

ಆತನು ಬಹಳ ಚಲುವ. • ಶುದ್ಧ ಆರ್ಯ ರೂಪಿ. ಬಿಳುಪಾಗಿ ತೇಜಸ್ವಿಯಾಗಿದ್ದನು. ಮುಖದಮೇಲೆ ಕೂದಲು ಭಾರ ಹೆಚ್ಚಾಗಿರಲಿಲ್ಲ. ಆತನ ಬಳಿ ನಿಲ್ಲುವುದೇ ಒಂದು ಸುಖಸಮಯವೆನ್ನುವಂತಿತ್ತು. ಅವನ ಹಾಗೆ ನಾನೂ ಆಗುವುದಾದರೆ ಆಗಬಹುದು. ಆದರೆ ಮೂಲ ರೂಪಕ್ಕೂ ಪುಟವಿಟ್ಟ ರೂಪಕ್ಕೂ ಅಷ್ಟೊಂದು ವ್ಯತ್ಯಾಸವಾದರೆ, ಪ್ರಪಂಚ ವ್ಯವಹಾರ ಕಷ್ಟವಾದೀತಲ್ಲ ಎನ್ನುವವೇಳೆಗೆ, ಇನ್ನಾರೋ ಕೆಲವರು ಅಲ್ಲಿಗೆ ಬಂದರು. ನಮ್ಮ ಕಡೆಗೆ ಒಬ್ಬಳು ಹೆಂಗಸು ಮಾತ್ರ ಬಂದಳು, ಉಳಿದವರು ನಡುಮನೆಯ ಆಚೆಕಡೆ ನಿಂತರು.

ನಮ್ಮಲ್ಲಿಗೆ ಬಂದ ಹೆಂಗುಸಿಗೆ ಆದಿನ ಪ್ರಯೋಗ ನಡೆಯಬೇಕಾಗಿತ್ತು. ಆಕೆಯ ರೂಪಗ್ರಹಣ, ಮೂಲ ನಿರ್ಧಾರ, ತೂಕ, ಅಳತೆ, ಮೊದಲಾದುವೆಲ್ಲ, ಆದನಂತರ ಶೋಧನ ಶಿಲಾಗೃಹಕ್ಕೆ ಕಳಿಸಲಾಯಿತು. ದೂರದಲ್ಲಿದ್ದ ನನ್ನನ್ನು ಆತ ಕರೆದನು. ನಾನು ಬಾಗಿಲ ಬಳಿ ನಿಂತೆನು, ಆದರೆ ಒಳಗೆ ನೋಡಬೇಕಾದ್ದಿರಲಿಲ್ಲ. ಬಾಗಿಲೆದುರಿನ ಕನಡಿಯಲ್ಲಿ ಒಳಗೆ ನಡೆದುದೆಲ್ಲ ಕಾಣುತಿತ್ತು. ಕೋಣೆಯೊಳಗೆ ಹೆಂಗಸಿನ ದೇಹವ ಕಡೆಗೆ ಮೂಲೆ ಮೂಲೆಯಿಂದ ಒಂದೊಂದಾಗಿ ತೇಜಸ್ಸು ಬೀರುತ್ತಿತ್ತು. ಅವು ಹಾಗೆ ಬೀರಿದ ನಂತರ ದೇಹದಿಂದ ಒಂದೊಂದಾಗಿ ಭೌತಪದಾರ್ಥಲಯವಾಗುತಿತ್ತು. ಆ ಹೆಂಗುಸಿನ ಮುಖದ ಮುಗುಳುನಗೆ ಮಾತ್ರ ಹಾಗೆ ಇತ್ತು. ದೇಹ ಕರಗುತ್ತ

ಇತ್ತು. ಒಳಗೆ ಇದ್ದವಳಿಗೆ ಯಾವಭಯವೂ ಇದ್ದಂತೆ ಕಾಣಲಿಲ್ಲ. ಕಡೆ ಕಡೆಗೆ ಕೋಣೆ ನೀಲಿಮವಾಯಿತು. ಅದರ ನಡುವೆ ಒಂದು ಜ್ಯೋತಿ ಇತ್ತು. ಅದರ ಸುತ್ತ ಆರು ಸಣ್ಣ ಜ್ಯೋತಿಗಳಿದ್ದವು. ಅವು ಸುತ್ತ ತಿರುಗುತ್ತಿದ್ದವು. ಕೋಣೆಯ ಆಕಾಶದಲ್ಲಿ ಒಂದು ಸೂರ್ಯ ಮಂಡಲವೂ, ತಾರಾವ್ಯೂಹವೂ ಮಿನುಗುತ್ತ ಇದ್ದಂತೆ ಭಾಸವಾಯಿತು. ಅನಂತರ ನನ್ನ ಸಂಗಡಿಗನು ಅತ್ತ ಇತ್ತ ಬಹಳ ಓಡಾಡುತ್ತ ಬಾಗಿಲಿನಲ್ಲೊಂದು ಕಡೆ ಒಂದು ಸಾಲಿನ ಸಂಖೆಗಳನ್ನು ನೋಡಿ ನೋಡಿ ಏನೇನು ಪದಾರ್ಥಗಳು ಆ ಹೆಂಗುಸಿನ ದೇಹಕ್ಕೆ ಸಾಲವೂ ಅವನ್ನೆಲ್ಲ ಆಕರ್ಶಿಸಿ ಪೂರ್ಣಯೌವ್ವನದೇಹಕ್ಕೆ ಬೇಕಾದ್ದೆಲ್ಲ ಕೂಡಿಸಿಕೊಟ್ಟ ಹಾಗಾಯಿತು. ಅನಂತರ ಇನ್ನೊಂದು ಕೀಲು ತಿರುಗಿಸಿದನಂತರ ಶೋಧನಮಂದಿರದ ನೀಲಿ ಆಕಾಶದಲ್ಲಿ ಆಕಾರವು ಕಾಣುತ್ತ ಬಂತು. ಸ್ಥೂಲವಾಗಿ ಕಾಣುವವರಿಗೆ ನನಗೆ ಬಹಳ ಕುತೂಹಲವಿತ್ತು. ಸ್ಥೂಲ ಶರೀರವೇ ಅವತಾರವಾಯಿತು. ಅದನ್ನು ನೋಡಿ ನಾನು ಸಂತಸಬಟ್ಟೆ. ಹೆಂಗುಸಾದ ಆಕೆಯ ದೇಹವನ್ನು ನೋಡುವ ಆಸೆಗಿಂತ, ಲವಲವಿಕೆಯ ಆ ಸ್ಫುರತ್ ರೂಪವನ್ನು ಕಾಣುವುದನ್ನೂ, ಪುನಹಾ ಆಕೆ ಓಡಾಡುವುದನ್ನು ಕಂಡು ಆಕೆ ಜೀವದಿಂದ ಇರುವುದನ್ನೂ ಮೊದಲಿಗಿಂತ ಹೆಚ್ಚಿನ ಶಕ್ತಿ ಪಡೆದಿರುವುದನ್ನೂ ಕಾಣಬೇಕೆಂದು ತವಕ ಪಡುತ್ತಿದೆ.

ಆಕೆ ಪೂರ್ಣರೂಪ ಪಡೆದನಂತರ ಅತ್ತಕಡೆ ಬಾಗಿಲು ತೆರೆಯಿತು. ಆಕೆಯು ಹೊರ ಹೊರಟಳು. ಅಲ್ಲಿಗೆ ಆವೇಳೆಗೆ ಪ್ರಯೋಗ ಪಡೆದಿದ್ದ ಆಕೆಯ ಗಂಡನೂ ಬಂದು ಸೇರಿದನು. ಆ ಇಬ್ಬರ ಜೋಡಿ ದೇವತಾಜೋಡಿಯಂತಿತ್ತು. ಇದು ಇಡೀ ಪ್ರಪಂಚಕ್ಕೆ ಬಹು ಮುಖ್ಯವಾದ ಆವಿಷ್ಕಾರವು. ಈ ಪ್ರಯೋಗವು ಸಫಲವಾಯಿತು. ಹೋ, ಹೋ! ಇದನ್ನು ಜಗತ್ತು ಅರಿದೀತೇ-ಎಂದು ಉತ್ಸಾಹದಿಂದ ಕೂಗಿಬಿಟ್ಟೆ.

ನನ್ನ ಸಂಗಡಿಗನಾದ ಯತಿಯು ಹತ್ತಿರ ಬಂದು ಭುಜ ತಟ್ಟಿ—"ಈಗೇನು ಮಾಡುವಿರಿ, ನಿಮಗೆ ಒಪ್ಪಿಗೆಯಾದರೆ ಬನ್ನಿರಲ್ಲ. ನೀವೂ ಕೂಡ ಹೊಸ ದೇಹ ಪಡೆದುಕೊಳ್ಳುವಿರಿ ಬನ್ನಿರಲ್ಲ—" ಎಂದು ಆಸಕ್ತಿಯಿಂದ ಬೇಡಿಕೊಂಡನು.

ಆಗ ನಾನು ಕೇಳಿದೆ—"ಇದು ಮೊದಲು ತಿಳಿಸಿರಿ. ಪ್ರಯೋಗಾನಂತರ ನಾನು ಹೇಗಾಗುವೆನು? ನಾನು ಮಿಶ್ರಕಃಲದವನು. ದೇಹ ಸೋತುಹೋಗಿದೆ. ನಾನು ಪ್ರಯೋಗ ಮಂತ್ರದಲ್ಲಿ ಹೊಕ್ಕರೆ ಏನೇನು ಬದಲಾವಣೆಯಾದೀತು ಹೇಳಿರಿ-" ಅದಕ್ಕೆ ಆತನು ಉತ್ಸಾಹಯುತನಾಗಿ ಹೇಳಿದನು—"ನಿಮ್ಮ ಕೂದಲು ಕಪ್ಪಾಗುತ್ತದೆ. ಹಲ್ಲು ಹೊಸದಾಗಿ ಮೊಳೆಯುತ್ತದೆ. ಕಣ್ಣು ಶುಭ್ರವಾಗುತ್ತದೆ. ಚರ್ಮದ ಹೊಳಪು ಮತ್ತು ಬಿಳುಪು ಹೆಚ್ಚುತ್ತದೆ. ದೇಹದ ಎತ್ತರಹೆಗುತ್ತದೆ. ಮೂಗು ಮೋರೆ ಸಹ ಉದ್ದುದ್ದವಾಗಬಹುದು. ಅದೆಲ್ಲ ಬೇಡವೆ? ಹೀಗೇ ಬಗ್ಗಿ ಕುಗ್ಗಿ ಹೀನಾಯವಾಗಿ ಇರುತ್ತೀರಾ?"

ಏನು ಹೇಳಲೂ ತೋಚಲಿಲ್ಲ. ಹಾಗೆ ಹೊಸರೂಪಾಗಿ ಹೋದರೆ ನನ್ನ ಮಾವನಾಗಲೀ, ಮಕ್ಕಳಾಗಲೀ, ಕಡೆಗೆ ಹೆಂಡತಿಯಾಗಲೀ, ಗುರುತಿಸಲಾರರು. ಯಾರೋ ಹೊಸಬರೆಂದು ಯುಗಾದಿಯ ದಿನ ಹೊರಗಿಟ್ಟರೆ ಏನು ಗತಿ! ಮನೆಯಲ್ಲಿ ತಿಳಿಸಿಬಂದರೆ ಒಳ್ಳೆಯದು. ಸಂಗಡ ಹಳೆಯ ಫೋಟೋ ಇಟ್ಟುಕೊಂಡಿರಬೇಕು. ಅನುಮಾನಪಟ್ಟಾಗ—"ಇದೋ ನೋಡಿ ನಾನೇ ಅಲ್ಲವೆ ನಿಮ್ಮಾತ!– ಎಂದು ಹೇಳಿಕೊಳ್ಳಬಹುದು—" ಹೀಗೆಂದು ಯೋಚಿಸಿ ಉಯ್ಯಾಲೆಯಲ್ಲಿದ್ದ ನನ್ನ ಮನಸ್ಸನ್ನು ಅರಿತು ಆತ ಮತ್ತೆ ಸಲಹೆ ಕೊಟ್ಟ—"ಹಾಗಾದರೆ, ನಿಮ್ಮ ದೇಹದ ವಿಮರ್ಶೆಮಾಡಿಕೊಳ್ಳಿರಿ. ಅನಂತರ ಸ್ವಲ್ಪ ಸ್ವಲ್ಪ ಭೌತಪದಾರ್ಥಗಳನ್ನು ಕೊಡಿಸಿಕೊಂಡು ಹೋಗಿರಿ. ಇನ್ನೊಮ್ಮೆ ನಿಮ್ಮ ಪತ್ನೀಸಮೇತ ಬನ್ನಿರಿ. ಆದರೆ ಇಲ್ಲಿ ಬಂದ ದಂಪತಿಗಳು ಇಲ್ಲಿ ಒಂದು ವರ್ಷವಿದ್ದು, ಮೊದಲ ಸಂತಾನವನ್ನು ಇಲ್ಲಿಗೆ ದತ್ತಕಮಾಡಿ ಮುಂದೆ ಹೋಗಬೇಕು. ಅಷ್ಟೇ ಇಲ್ಲಿಯ ನಿಯಮ. ಇನ್ನೇನೂ ನಮಗೆ ದ್ರವ್ಯ ಬೇಡ. ಪ್ರಕೃತಿಯಿಂದ ನಮಗೆ ಅವಶ್ಯವಾದುದೆಲ್ಲ ದೊರೆಯುತ್ತದೆ. ಇಲ್ಲಿಗೆ ಬೇಕಾದ ಶಿಲ್ಪಿಗಳೆಲ್ಲ ಇಲ್ಲಿ ಇದ್ದಾರೆ. ಅವರಿಗೆ ಆಹಾರ ವ್ಯವಹಾರ ವ್ಯವಸ್ಥೆಯೆಲ್ಲ ಇಲ್ಲಿಯೇ ಇದೆ. ಹೊರಡಿರಿ ಭೌತಬಂಡಾರದ ಕೋಣೆಗೆ."

ನಾನು ಮಂತ್ರಮುಗ್ಧನಾಗಿ ಆತನ ಹಿಂದೆ ಹೋದೆನು. ಒಂದು ಕಡೆ ದುಂಡನ್ನ ಮೇಜಿನ ಮೇಲೆ ಕುಳಿತೆನು, ನಿಂತೆನು, ಮಣಿದೆನು, ಅನಂತರ

ಎದ್ದು ಬಂದೆನು. ದ್ರಾವಿಡ, ಹೂಣ, ಶಕ ಮಿಶ್ರವಾದ ಆರ್ಯದೇಹವಾಗಿತ್ತು ನನ್ನದು. ಇನ್ನೊಂದು ಕೋಣೆಗೆ ಹೋಗಿ ನಿಂತಾಗ ನನ್ನ ದೇಹಕ್ಕೆ ಅವಶ್ಯವಾದ ಕಬ್ಬಿಣ, ಸುಣ್ಣ, ತಾಮ್ರ, ಬಂಗಾರಗಳು ಕೂಡಿಕೊಂಡವು. ಹೊರಗೆ ಬಂದೆ—ಮೊದಲಿಗಿಂತ ಲಕ್ಷಣವಾದೆ. ಮನೆಗೆ ಇನ್ನು ಹೋಗಿಬಿಡಬಹುದು. ಯುಗಾದಿಗೆ ಹೊಸ ವಸ್ತ್ರ, ಹೋಳಿಗೆ ತುಪ್ಪ, ಇಲ್ಲದಿದ್ದರೆ ಚಿಂತೆಯಿಲ್ಲ, ದೇಹವಾದರೂ ಸ್ವಲ್ಪ ಹೊಸತಾಯಿತಲ್ಲ, ಎಂದುಕೊಂಡೆ. ನನ್ನ ಗೆಳೆಯನ ಸಂಗಡ ಕಡೆಯ ಮಾತಾಡಿ ಮತ್ತೆ ಯಾವಾಗ ಬರಬೇಕು ಎಂದು ಮುಂತಾಗಿ ಆಲೋಚನೆಗೈಯ್ಯಬೇಕಾಗಿತ್ತು....................

ಆದರೆ ಅಷ್ಟರೊಳಗೆ ಅನಾಹುತವಾಯಿತು. ಯಾರೋಬಲವಾಗಿ ಜಗ್ಗಿ ಎಳೆದು ಅಲುಗಾಡಿಸಿದರು—“ಏಳಿರಿ, ಏಳಿರಿ, ನಿಮ್ಮ ಟೇಷನ್ ಇದೇ ಅಲ್ಲವೆ? ಏಳಿರಿ!-ಎದ್ದೇಳ್ರೀ!—” ಇದೇನೇ ಟೇಷನ್! ನಿಮ್ಮ ಮನೆಯವರೆಲ್ಲ ನಿಂತು ಕಾದಿದಾರ್ರೀ! ಎದ್ದೇಳ್ರೀ—” ಹೀಗೆ ಯಾರಾರೆಲ್ಲ ಗೊಂದಲ ಹಾಕಿದ ಮೇಲೆ ಎದ್ದೆ-ಇದೇನು—“ಆವುತೀಹಳ್ಳಿ ಯಾವಾಗ ಬಿಟ್ಟಿತು ರೈಲು!” ಎಂದೆ ಆಗ ನನ್ನ ಗೆಳೆಯನು—“ಏನು ಆಹುತಿಯೋ! ಯಾರು ಬಲ್ಲರು! ಇದಂತೂ ನಿಮ್ಮ ಸ್ಟೇಷನ್ ಎಂತ ಕಾಣುತ್ತೆ! ಯುಗಾದಿ ಹಬ್ಬ ನಿಮ್ಮೂರಲ್ಲಿ ಆಗಬೇಕಾದರೆ ಏಳಿರಿ, ರೈಲು ಹೊರಡುವ ಸಮಯ ಬಾಗಿಲು ತೆಗೆದು ಧುಮುಕಿರಿ. ನಿಮ್ಮ ಗಂಟು ಆಗಲೆ ಕೆಳಗೆ ಹಾಕಿಬಿಟ್ಟೆ!-” ಎಂದರು.

ನಾನು ಕೆಳಗೆ ಹಾರಿದೆ ರೈಲುಹೊರಟಿತು. ಜೇಬು ಹುಡುಕಿದರೆ ಟಿಕೀಟು ಸಿಕ್ಕೀತೋ ಇಲ್ಲವೋ ಎನ್ನುತ್ತ ಹುಡುಕುವುದರೊಳಗೆ ನನ್ನ ಚಿರಂಜೀವಿಗಳು ನನ್ನ ಎಳೆದೊಯ್ದು ಗಾಡಿಯಲ್ಲಿ ಕೂರಿಸಿದರು. ಅದು ಬೋಳುಗಾಡಿಯಾದರೇನು ಮೆತ್ತನೆ ಹುಲ್ಲು ಇತ್ತು. ಎತ್ತೆರಡೂ ಮನೆಯವು. ಗಾಡಿಯಾತ ಮನೆಯಾಳು. ಸಂಗಡ ಮನೆಯ ಮಕ್ಕಳು. ಗಡಗಡ ಹೊರಟೆವು. ನಮ್ಮ ಹುಡುಗರಿಗೆ ನನ್ನ ಕಂಡ ಆನಂದವೇ ಸಾಕಾಗಿತ್ತು. ಅವರು ಏನೇನೋ ಕೂಗಿಕೊಂಡು, ಅದು ಇದು ನನಗೆ ತೋರಿಸುತ್ತ ಇದ್ದರು. ಸಣ್ಣ ಕೂಸು ಇಂದಿರಾ ಬಂದಿತ್ತು. ಅದು—” ಕಾಪತಿ ಕಾಣಿಕ ಟಲ್ ಟಲ್ ಟಲ್ ಟಲ್ ಟಲ್ ಎಂದು ಹೇಳುತ್ತ ನನ್ನ

ಶಾಲು, ಉಂಗುರ, ಪಂಚೆ, ಅಂಗಿ, ಜೋಡು ಮೊದಲಾದ್ದೆಲ್ಲ ನೋಡಿ ನೋಡಿ ಅಚ್ಚರಿಬಡುತ್ತಿತ್ತು.

ಮನೆಗೆ ಹೋದ ಮೇಲೆ ನನಗೆ ಸ್ನಾನಮಾಡಿಸಿ, ಜರತಾರಿ ಪಟ್ಟಿ ಮಡಿ ಉಡಿಸಿ ಬೇವು ಬೆಲ್ಲ ತಿನ್ನಿಸಿದರು. ಬೆಳ್ಳಿ ಹೂವಿನ ಮಣೆಯ ಮೇಲೆ ಕುಳಿತೆ. ಬಂಗಾರದ ಲೇಪ ಹಾಕಿದ ಬೆಳ್ಳಿ ತಟ್ಟೆಯಲ್ಲಿ-ಕೇಸರೀಭಾತು, ಕಮ್ಮನೆ ತುಪ್ಪ, ವಾಂಗೀಭಾತು, ಚಿರೋಟಿ ಮೊದಲಾದ್ದೆಲ್ಲ ಸವಿಸವಿದು ತಿನ್ನುತ್ತಿದ್ದಾಗ, ನಮ್ಮ ಚಿಂತಾಮಣಿ ನನ್ನ ಬಳಿಗೆ ಎದ್ದು ಬಂದು-ಅಪ್ಪಯ್ಯ ಎಂಥಾ ಸೊಗಸಾಗಿ ತಿಲುಕ ಇಟ್ಟುಕೊಂಡಿದ್ದಾನೋ, ನೋಡೇ ಅಮ್ಮ ಯ್ಯಮ್ಮಾ!" ಎಂದು ಗಲ್ಲ ಹಿಡಿದು ಅಲ್ಲಾಡಿಸಿದಳು—"ಅಪ್ಪಯ್ಯ! ನಿನ್ನ ಗಡ್ಡ ಹಣ್ಣಾತು, ಹಲ್ಲೆಲ್ಲ ಉದುರಿಹೋತು, ಕಣ್ಣೆಲ್ಲ ಮಂಜಾತು, ಕನಡಿ ತಂದುಕೊಡಲೇನಪ್ಪಾ! ಮುದುಕಪ್ಪಾ!'' ಎಂದು ನಕ್ಕನು. ಇಂದಿರಾ ಆಗ ಚಪ್ಪಾಳೆ ತಟ್ಟಿ-ಕಾಪತಿ ಕಾಣಿಕ ಟಿಲ್ ಟಿಲ್ ಟಿಲ್-ಎಂದು ಅಣಕಿಸಿ ಕುಣಿದು ಮನೆಯಲ್ಲೆಲ್ಲಾ ಎಂಜಲು ಹಾರಿಸಿದಳು.

ನನಗ ನಿದ್ರೆ ಸರಿಯಾಗಿರದ ಸಂಕಟ ಒತ್ತಟ್ಟು, ಕನಸೇ ಏನೋ ರೈಲಲ್ಲಿ ಆಗಿದ್ದ ಸಂಕಟ ಒತ್ತಟ್ಟು—ಯಾರ ಹಾಸ್ಯವೂ ನನ್ನ ಮನಸ್ಸಿಗೆ ಸಾಧಾರಣವಾಗಿ ಚುಚ್ಚುವಂತಿರಲಿಲ್ಲ! ಆದರೆ ನನ್ನಾಕೆಗೆ ಆ ಹಾಸ್ಯ ನೋವು ಕೊಟ್ಟಿತು. ಆದುದರಿಂದ ಅವಳಿಂದ ಈ ಮಾತು ಹೊರಟವು—"ಸಾಕು ಸುಮ್ಮನಿರೆ, ನಿನ್ನ ಹಾಸ್ಯ! ನಿದ್ದೆ ಇಲ್ಲದೆ ಎಷ್ಟು ದಿನವಾಯಿತೋ ಏನೋ. ಹಾಳು ಮೇಷ್ಟರ ಕೆಲಸ. ಬಡಕೊಂಡು ಬಡಕೊಂಡು ಗಂಟಲೆಷ್ಟು ನೋವಾಗಿ ದೆಯೋ ಏನೋ! ಸಾಕು ಸುಮ್ಮನಿರು. ಏನು ನಿನ್ನಾಟ! ಹುಚ್ಚುಹುಚ್ಚಾಗಿ ಹೋಗಿ ಎಂಜಲು ಕೈಲಿ ಮುಟ್ಟಬಿಟ್ಟೆ. ಇನ್ನೂ ಏಳೇವರ್ಷದ ಎಳೇಕೂಸು ಎದ್ದು ನಡೀ. ಎರಡು ತುತ್ತು ಊಟವಾದರೂ ಮಾಡಲಿ ಬಿಡು........!"

ಆಗ ನನ್ನ ಯೋಚನೆಗೆ ತುದಿಮೊದಲಿರಲಿಲ್ಲ. ಯುಗಾದಿಯ ಹೊಸ ಬಟ್ಟೆಗಿಂತ ಹೊಸ ದೇಹವೇ ಚೆನ್ನಾಗಿರುತಿತ್ತು. ಆದರೆ ನನ್ನ ದೇಹದಲ್ಲಿ ಬದಲಾವಣೆಯಾಗಿರಬೇಕಲ್ಲವೆ? ಅದನ್ನು ಯಾರಾದರೂ ಗುರುತಿಸಿದರೆ ಮುಂದೆ ಏನಾದರೂ ಹೇಳಬಹುದಾಗಿತ್ತು. ಆದರೆ ಯಾರೂ ಗುರುತಿಸಲಿಲ್ಲ. ನಾನು ಹಳಬನೇ ಆಗಿದ್ದೆ. ನನ್ನ ಉಂಗುರ ಮತ್ತು ಶಾಲೂ ಅವೇ ಆಗಿ

ದ್ದವು ಅವರ ಕಣ್ಣಿಗೆ! ನನ್ನ ನವೀನ ಅನುಭವದ ವಿಚಾರವನ್ನು ಯಾರಿಗೆ ಹೇಳಲಿ ಎಂದು ವ್ಯಾಕುಲನಾದೆ.

# ೬. ಹೋರ್ಹಾರ್

"ಮಗು, ಹೊನ್ನೂರಾ! ನಿನ್ ಮಾರಿಗಾನ ನೋಡಾಂಗಿಲ್ವೇ. ಕಬೋದೀ ಆಗ್‌ಬುಟ್ಟೆ ಕಾಣಾ! ಹೊನ್ನೂರಾ! ಹೊನ್ನೂರಾ!"

" ಅಮ್ಮಾ ಹೀಗೆಲ್ಲ ಆಡಿದರೆ ಜನ ಏನೆಂದಾರು. ಏನೆ, ಏನಮ್ಮಾ! ಇನ್ನೆಲ್ಲೂ ಹೋಗುಲ್ಲಾ. ನಿನ್ನ ಬಿಟ್ಟು ಹೋಗೋದೆ ಇಲ್ಲ. ಇಲ್ಲೇ ಇರೋದಾಗುತ್ತೆ; ಅಥವ ನಾನೆಲ್ಲಿಗಾದರೂ ಹೋದರೆ ನಾನು ಆಮೆ ನೀನೇ ಚಿಪ್ಪು ಕಣಮ್ಮಾ. ನೀನೇ ಹಕ್ಕಿ ನಾನೇ ನಿನ್ನ ರೆಕ್ಕೆ ಪುಕ್ಕ. ಆಗ ಬೋದೇನಮ್ಮಾ. ಇಬ್ಬರೂ ಎರಡು ಬೀಸುಕಲ್ಲು ಹೋಳಿದ್ದ ಹಾಗೆ ಇರೋಣಮ್ಮಾ."

"ಬುಡು, ಬುಡು, ಆ ಮಾತೆಲ್ಲ. ಬೀಸೂಕಲ್ಲ ಮಾತೆಲ್ಲ. ನೆಲೆ ನಿಂತು, ಮನೆಗಿರೋ ಹೋಳು ನಿನ್ ಹೆಂಡ್ರು. ಅವಳಾವಳೋ ಚಂದುಳ್ಳಿ ಹೆಣ್ಣು ಬರ್ತಾಳೇಳು. ನೀನೇನೋ ಮೇಲ್ ಮೇಲ್ ಹಾರೋ ಕಲ್ಲೇ. ನನ್ ಕಟ್‌ಕೊಂಡೇನ ಮಾಡೀವಿ ಏಳು. ಇಂದೋ ನಾಳೋ ಕಣ್ ಮುಚ್ಚಿಕೋವಾ ಮುಕ್ಕಿ! ನಿನ್ ಹೆಣ್ ಹಕ್ಕಿ ಅದಾವಮೋ ತತ್ತಾ. ಈ ವೂರೇನ ಹಾಳಾ, ಹೊನ್ನೂರಾ? ನಡುಕಲಟ್ಟೆ ದೇವುವ್ವೆ. ದೇವುವ್ವ ಕಣ್ಣಾ! ಕಾಣೆಯಾ? ನೀನು ರಾಮನ ಯಾಸಾ ಹಾಕೀ. ಕುಣಿದೂ, ಕುಪ್ಪಳಿಸೀ.........

........ಅಯ್ಯ, ಲಕ್‌ಚ್ಮಣಾ, ಸುಗ್ರೀವನು, ತನ್ನ ಹೆಂಡತಿಯೂ,
ತನ್ನ ರಾಜ್ಯಾವೂ, ಕೈಸೇರಿತೆಂದು ಭೋಗಾದಿಂದ (ಆಮೋಕೇನೋ

ಮರೆತೇಪ್ಪಾ, ಹೂ ಹೂ........)ಯೋ ಸಹೋದರ, ಸೂರ್ಯಪುತ್ರ ನಿಂದ ನಮ್ಮ ಕಾರ್ಯವು ಜಯಪ್ರದಾ ಆಗಬೇಕು. ನಾವು ದೇಶ ಕೋಶವಂ ತೆಜಿಸಿ ವಿಪಿನ ವಾಸೀ ಆಗಿ, ಆ ರಾವಣನನ್ನು, ಸೈನ್ಯ ಬಲ ಸಮೇತ, ಆ ಖೂಳನನ್ನು ಗೆಲ್ಲಲು, ಹೇ, ತಮ್ಮ, ಅವನ ಶಹಾಯವು ಬೇಕ್ಕೈ ತಮ್ಮ, ಶಾಂತ್ತನಾಗಿ ಪೋಗಿ ಬರುವುದೈ ತಮ್ಮಾ....

—ಅಂದಾಗ ಚಂಡೂವಿನ ಮಾಲೇ ಹಾಕಿಸಲಿಲ್ವಾ, ಒಂದು ಪರಿಕಾರದ ಉಡಿಗಿ ಕೈಲಿ! ಹೂಂತೀನಿ! ಆ ಮುಕ್ಕ ನಿನ್ನ ಮರ್ತಿಲ್ಲ. ತಂಗೋ ತಮ್ಮಕ್ಕಂಗೋ ನಿನ್ ಗಾಳಾ ಹಾಕಿ ಹಿಡೀಬೇಕೂಂತಾ ಕಾಣ್ಲಾ! ದೇಮವ್ವ ಪಾಪ, ಗಂಡುಳ್ಳ ಗರ್ತಿಯಲ್ಲಾ.. ಈಗ! ಎತ್ತು ಹೂಡಿದರೆ ಬಿಚ್ಚೋರಿಲ್ಲ. ಬಿಚ್ಚಿದರೆ ಹೂಡೋರಿಲ್ಲ! ದೇಮವ್ವನ ಹತ್ರ ಹೇಳ್ಲಾ, ಏನ್ಲಾ! ಸಿಂಗಾರಾ ಆಗಿ ಬಂದು ನಿಂತಗಾನಾ, ಕತ್‌ಗೊಂಡು ಉರೀತಾಳ್ಲಾ, ಎಳಕೊಂಡು, ಎತ್ತಿಗೊಂಡು ಮುತ್‌ಕೊಡ್ಲಾ ಅನ್ನಸ್ತೈ, ನನ್ನಂತಾ ಮುಕ್ಕೀಗೆ, ದೇಮವ್ವಾನೂ ಅಂದ್ಲು—"ಅಜ್ಜಿ, ಕೊಲ್ಲೂರಜ್ಜೀ, ಇದ್ದಕ್ಕೋದೋನ ಮಾತು ಗಾನಾ ಹ್ಯಾಂಗಾ-ನೀನು ನನ್ ಹೆಣ್ಣುಗಳು ನೋಡಿ ತಬ್ಬಿಬ್ಬಾಗ ಬೇಡಾ. ಅವಬರಲಿ, ಅತ್ವಾ ನಿನ್ ಮಗಾ ಕಿರಿಯೋನಿಗಾದರೂ ತಂದುಕೋ ಒಂದ. ಎರಡು ಮನೆ ಒಂದಾಗ್ಲಿ, ನನ್ ಹಂಬರ್ಳ ತೋಟದ ಬೇಲೀ ಕಿತ್ತಾಕಿ ನಿಂನ್ ಅಡಿಕೆ ತೋಟಕ್ಕೆ ಹಬ್ಬಿಸಿಬಿಡೋಳೇ ನಾನು—ಅಂದ್ಲೂ ದಿಟ, ಅವಾ ಕಣ್ ಮುಚ್ಚಿಬಿಟ್ಟ. ಒಬ್ ಹೋದರೆ ಒಬ್ಬಿದಾನೆ, ರಾಮ ಲಚ್ಮಣ-ಎಂತಾ, ಎಲ್ಲಾನೂ, ಈ ಹಟ್ಟೀಲಿ, ಅಂತಿದ್ದರು.—"

"ಅಮ್ಮ, ನೀನು ಹೀಗೆಲ್ಲ ಆಳಬೇಡಮ್ಮಾ. ನಾನಿದ್ದೇನಲ್ಲ. ಎನೋ ಭಾಗ್ಯವಿಲ್ಲ. ಅವನು ಹೋಗಲಿಬಿಡು. ನಾನು ಆ ಕರೀ ಜನರ ದೇಶವಲ್ಲಿ ಕಾಲುಮುರುಕೊಂಡು ಮಲಗಿದ್ದಾಗಲೇ, ಅವನ್ನ ಕನಸಲ್ಲಿ ಕಂಡೇ. - ಕೂರೋ ನಿನಾಕೆ ಬಂದೆಯೋ ಅಮ್ಮ ಹೇಗಿದಾಳೋ, ಎಂದರೆ ಹೇಳಲಿಲ್ಲ. ಹೋಗಿಬಿಟ್ಟ ಅದೇ ದಿನಾನೇ ಇಲ್ಲಿ ಅವನು ಕಣ್ಣುಮುಚ್ಚಿರಬೇಕು. ಅಂತು ನಿನಗೆ ತುಂಬಾ ಕಷ್ಟವಾಯಿತು. ಇನ್ನೊಂದು ವಿಷಯ, ಆ ದೇಮವ್ವನ ಹೆಣ್ಣೀ ಮದ್ವೆಯಾಗು ಎಂದೆಯಲ್ಲವೆ? ಅದರ ವಿಚಾರ ನಿಂಗೆ ಹೇಳಬೇಕು, ಅಲ್ಲವೆ? ನೀನು ನನ್ನ ಹಡೆದವಳು, ನಿನ್ನ ಮುಂದೆ ಗುಟ್ಟೇನಮ್ಮ. ನಾಳೆ

ಹೇಳಿಬಿಡುತ್ತೇನೆ. ಅವರಿವರ ಮಾತು ಇರಲಿ. ನನ್ನ ನಿನ್ನ ಮಾತು ಆಗ ಬೇಕು. ಕಂದಾಯ ಎಲ್ಲ ಕೊಟ್ಟ್ಯೊ? ಗುತ್ತಿಗೆ ಹಣ ಬಂತೋ? ಬಾಕಿ ಸಾಕಿ ಎಲ್ಲ ಹೇಳಿಬಿಡು."

"ಅದೇನಾ ಹೀಗೆಲ್ಲಾ ಅಂಬ್ತೀಯಾ! ಮತ್ತೇನಾ ಹೊರಟೇಯ ಯೆಂಗೆ. ನಾನೂ ಕೆಲಸ ವಸಿ ಮಾಡಿದ್ದೀನಿ, ನಿಂಗೆ ಏನೂ ಉಳಿಸಿಲ್ಲ. ನನ್ ಮಗಾ, ಕೇಳು ನಿನ್ನಪ್ದೀರೂ ಯುದ್ಧಕ್ಕೇ ಹೋಗಿದ್ದರು. ಅವ ರಂಥಾ ಸಿಪಾಯಿ ನೀನೇನಾದರೂ ಆಗೀಯಾಂತ, ಅವರ ಕಾಗಜ, ಬಿಲ್ಲೆ, ಭಲ್ಲೆ, ಬೂಡೀಸೂ, ಅಂಗೀಗುಂಡಿ—ಎಲ್ಲ ಬಚ್ಚಿಟ್ಟ್ಟು ಬೀಸೂಕಲ್ ಹೇರಿದ್ದೆ. ಆದರೇನಾ, ದೇವರಲ್ಲವ ದೇವರು, ಸಿಪಾಯ್ ಮಗ ಸಿಪಾಯ್ ಅದೇ ಆದ, ಅಲ್ಲದವ ಹೋದ. ಅದೆಲ್ಲ ಇರಲಿ, ಯಾರ್ ಸಟ್ ಗೇ ನೀನಿನ್ನು ಹೋಗಲೇ ಕೂಡದು, ಕಾಲ್ ಕೀಳ್ ಬಾರ್ದು. ಅದೆಲ್ಲ ಇರಲಿ ಮಗ, ಹತ್ರ ಬಾರೋ, ಕಣ್ಣಿಗೇನಾ ಮದ್ದೊಂದೆಲ್ಲೋ, ಅದೂ ಹಾಕು, ಆವರಿವೀಗೆ, ಹತ್ರಬಾ, ತಡವರಿಸಿ ನೋಡತೇನೋ ಅಯ್ಯೋ ಎಷ್ಟೋ ಬಡವಾಗಿದ್ದಿ. ಮೊಕ ಚಂದಾಕಿದೆ ಅವರದ್ದೇ ಹುರಿ ಮೀಸೆ, ಮೂಗು, ಅದ್ದೇ ತುಟಿ ಗಲ್ಲ ಅಯ್ಯೋ ಮಗಾ ಹೊನ್ನೂರಾ, ಕಾಲೆಲ್ಲೋ, ಒಂದೇ ಕಾಲಲ್ಲೋ ಅಯ್ಯೋ ದೇವರೇ! ನನ್ ಮಗನ ಕಾಲೇ ಕಿತ್ತೆಯಾ! ಪಾಪಿ ಇದ್ಧದೋನೇ! ಅಯ್ಯೋ ಒಂದೇ ಕಾಲೇನಪ್ಪಾ! ಸಾವಿರ ಸಾವಿರ ಮೈಲಿ ಹೆಂಗೋ ಬಂದೆ? ಅಯ್ಯೋ, ನನ್ ಮಗನ್ನಾ, ಎಲ್ಲಾರೂ ಕುಂಟಾ, ಹೆಳವಾಂತರಲ್ಲೋ. ಮಾರಿಮೇಲೆ ಮೀಸೆ ಹೊತ್ತು ಕಾಶೀಕಟ್ಟೆ ಪೇಟತಿದ್ದೀ ಅಮ್ಮಾ ನೋಡಮ್ಮಾ ಅಪ್ಪನಾಗೇ ಇದ್ದೀನಮ್ಮಾ, ಅಂತಾನ್ನೋಂಗೇ ಇಲ್ವಲ್ಲೋ! ಹೊನ್ನೂರಾ, ಹೊನ್ನೂರಾ, ಯುದ್ಧಕ್ಕೆ ಒಂದು ಕಾಲು ಬಲೀಕೊಟ್ಟೆಯಾ? ನಾನಿಲ್ಲಿ ಹೊಟ್ಗಿಲ್ಲದೆ ಒಬ್ಬನ್ನ ಬಲೀಕೊಟ್ಟೆ! ಅಯ್ಯೋ ರಾಮು ಲಚ್ಮಣಾಂತ ದಿಷ್ಟೀ ಇಟ್ಲಲ್ಲೋ ಕಡೇಮನೇ ಕಾಕಮ್ಮಾ! ಅಯ್ಯೋ ನನ್ ಮಗ ಹೆಳವಾ ದನೆ........"

"ಅಮ್ಮ, ಹೀಗೆಲ್ಲ ಅಳಬಾರದಮ್ಮ. ಸರಿಯಾಗಿ ಕೇಳಮ್ಮ, ನಿನ್ನ ಮಗ ಹೇಳಲೇನಮ್ಮ, ಕೇಳು ಮತ್ತೆ ಎಡಗಾಲು ಕಳಕೊಂಡಿರೋದೇನೋ ಸರಿ. ನೀನೇ ತಡವರಿಸಿ ನೋಡಿದೆಯಲ್ಲ. ಎದೇಲಿ ಒಂದು ಮೂಳೇನೂ

ಕಳಕೊಂಡಿದ್ದಾನೆ. ಆಮೇಲೆ ಮದಿವೆ ಆದ ಹೆಂಡತೀನೂ ಕಳಕೊಂಡಿದಾನೆ, ಅದೆಲ್ಲ ಕೇಳಿ ನೀನು ಅಳುವುದೇ ಇಲ್ಲ ಎಂದರೆ, ನಿನ್ನ ಕಣ್ಣು ವಾಸಿಯಾಗುತ್ತೆ. ಇಲ್ಲವೋ ಇಲ್ಲವೇ ಇಲ್ಲ. ಮತ್ತೆ ಇನ್ನೊಂದು, ವಿಚಾರ. ನಿನ್ನ ಪ್ರೀತಿ ಮಗನು ಬಲಗೈನೂ ಕಳ್ಳಕೊಂಡಹಾಗೇ, ಸ್ವಾಧೀನವೇ ಇಲ್ಲ ಬಲಗೈ. ಊಟವೆಲ್ಲ ಚಮುಚದಲ್ಲೇ ಆಗಬೇಕಮ್ಮ."

"ಇಲ್ಲಪ್ಪೋ ಇಲ್ಲ, ಅಳು ಮರತೆ. ನೀನು ಹೇಳಿದ ಹಾಗೇ ಇನ್ನೆಲ್ಲ ನಗು ಅಂದೆಯೋ ನಗತೀನಿ. ಮೂಲೆಮುಕ್ಕೀಂತ ತಾತ್ಸಾರ ಮಾತ್ರ ಮಾಡ ಬೇಡ ಕಂಡ್ಯಾ."

"ಇಲ್ಲಮ್ಮಾ ಇಲ್ಲಾ. ಇಷ್ಟೆಲ್ಲಾ ಕಳಕೊಂಡು, ಅಷ್ಟೆಲ್ಲಾ ಕಲಿತು ಕೊಂಡು ಬಂದದ್ದು, ಮನೆ ತಾಯೀನ ಹೀಯಾಳಿಸುಕ್ಕೇನಮ್ಮಾ? ಇಲ್ಲಮ್ಮಾ. ನಿನ್ನ ಮಗ ಏನೇನ ಮಾಡಬಲ್ಲ ಎಂತ ನಿನಗೆ ಮಾಡಿ ತೋರಿಸಿ, ಸಂತೋಷಪಡಿಸುವುದೇ ನನ್ನ ಕೆಲಸ. ಅದೂ ನೋಡಮ್ಮಾ. ಎದೆ ಊನಾಗಿ, ಕಾಲು ಹೋಗಿ, ಕೈ ಹೋದರೂ ನನ್ನಪ್ಪನ ಶಕ್ತಿ, ನನ್ನಮ್ಮನ ಹರಕೆ ಇಲ್ಲವೇನಮ್ಮಾ. ಇನ್ನು ನನ್ನ ಕತೆ ಹೇಳಿಬಿಡುತ್ತೇನೆ ಕೇಳಿಬಿಡು."

"ದೊಡ್ಡ ಮನೆ ದಾಸಪ್ಪನವರು ಇವತ್ತಿಗೆ ಸರಿಯಾಗಿ ನಾಲ್ಕು ವರ್ಷ ನಾಲ್ಕು ತಿಂಗಳು ನಾಲ್ಕು ದಿನ ಕಣಮ್ಮ. ಅಂದು ಗುರುವಾರ, ನಾನು ಶ್ರೀರಾಮ ಶ್ರೀರಾಮ ಶ್ರೀರಾಮಾಂತ ಮನಸಿನಲ್ಲಿ ಅಂದುಕೊಂಡು ಹೋದಾಗ, ಯಾರು ಯಾರನ್ನೋ ತೋರಿಸಿಗೊಂಡು ಮಾತಾಡುತ್ತ ಇದ್ದರು. ನಂಗೇನಂತೆ ಎಂತ ನಾನು ಸುಮ್ಮನೆ ಜಗಲಿ ಮೇಲೆ ಕೂತು ಗೊಂಡೆ—ಸ್ವಾಮಿ, ದಾಸಪ್ಪನವರೆ ಉಳಿದ ಹಣ ಕೊಡಿ. ಬೀಜ ಗೊಬ್ಬರ ಬೇಕು,—ಎಂದೆ. ಅವರೆಂದರು—ನಿನ್ನ ತಮ್ಮ ಬರಲೀಳು ಕೊಟ್ಟೀನು, ಬೀಜವಂತೆ, ಹೊಲವಂತೆ, ಗೊಬ್ಬರವಂತೆ ಅದೆಲ್ಲ ಇರಲಿ—ಒಂದಿಷ್ಟು ದೇಶತಿರುಗಿ ಬರೂವಿ ಕೈಲಿ ದಿಮ್ಮನೆ ಕಾಸು ಮಾಡಿಕೋ. ಶ್ರೀರಾಮನ ಪಾರ್ಟಿ ಮಾಡು. ಒಂದಿಷ್ಟು ಎಂದರು. ಅದಕ್ಕೆ ನಾನು—ಆಗಲಿ ಅದೆಲ್ಲಿ ಮೇಳಾ ಕಟ್ಟಿಸತೀರೋ ಬನ್ನಿ ಬನ್ನಿ ಹೋಗೋಣ—ಎಂದೆ."

"ಅದ ಕೇಳಿ ಖುಷಿಪಟ್ಟು ಅವರು ಒಂದು ಪಟ್ಟಿ ಹಾಕಿಸಿದರು, ಸಾಮಾನು ತರಿಸಿದರು-ಇದ್ದುಬಿಡಪ್ಪ ಸಂಜೆತನಕ—ಎಂದರು. ಆ ಸಂಜೇನೆ

ಆ ಊರ ಹೊರಗೇ ಆಯ್ತು ಬಾರಿ ಮೇಳ. ನಾನು ಚೆನ್ನಾಗಿ ಕುಣಿದೆ ಕಣವ್ವ. ರಾಮನ ಪಾರ್ಟು ಬಂತೋ ಎಂತ, ಭಾಗೋತರು ತಕಥೈಯ್ಯ, ತಕಥೈಯ್ಯ, ಓಂ ತತಜಣು, ತಜ್ಜಣು, ದ್ರಿಕಿಟತಾಂ ಎನ್ನುವ ಹೊತ್ತಿಗೆ ಬುಗ್‌ಬುಗಿಲ್ ಎಂತ ದೀಪ ಹೊತ್ತಿಗೊಂಡು, ನನ್ನ ಮುಕ ಎಲ್ಲ ಥಳಥಳಾ ರೆಂತು, ಮೈಯೆಲ್ಲ ಝುಲ್ ಝುಲಾರೆಂತು. ಸರಿ ಶುರುಮಾಡಿದೇ ಕಣಮ್ಮ ಎಲ್ಲ ನಿನ್ನ ಹಾಗೆ, ನೀ ಹೇಳಿಕೊಟ್ಟಿದ್ದಹಾಗೇ ಪುಟ್ಟವನಾಗಿದ್ದಾಗ ಹೇಳಿ ಕೊಟ್ಟಿದ್ದೆಯಲ್ಲ—ಹಾಗೆ ಎಲಯಲಾ ಹನುಮನಾಯ್ಕ, ಹೀಗೆ ಬಾ! ಭಲಾ ಸೂತ, ಮತ್ತೂ ಹೀಗೆ ಬಾ! ಯಲಾ ಚಾರ, ಈ ಚಪ್ಪನ್ನೈವತ್ತಾರು ದೇಶದಿ ಅತಿ ರಮಣೀಯದಿಂದೊಪ್ಪುತ್ತಿರುವ, ಅಯೋಧ್ಯಾಪುರದರಸಾದ, ಸೂರ್ಯವಂಶದ ದಶರಥ ಮಹಾರಾಯನ ಪುತ್ರರಾದ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬುದನ್ನರಿಯೇನಲಾ ಸಾರಥಿ!........"

"—ಯಲಾ ಹನುಮನಾಯ್ಕ, ಈ ಸಭಾ ಮಧ್ಯಕ್ಕೆ ಬಂದ ಕಾರಣ ವೇನೆಂದರೆ, ಪಿತೃವಾಕ್ಯಪರಿಪಾಲನೆಗೋಸುಗ, ಶ್ರೀ ಸೀತಾ ಲಕ್ಷ್ಮಣರೊಡನೆ ದಂಡಕಾರುಣ್ಯವಂಪೊಕ್ಕು, ಪಂಚವಟಿಯೋಳ್ ಪರ್ಣಶಾಲೆಯೊಳಿರುತಿ ರ್ದೆವು. ಖಳನಾದ ರಾವಣನು ನಾವಿಲ್ಲದ ಕಾಲದಲ್ಲಿ—ಹೀಗೆಂತೆಲ್ಲ ಹೇಳಿ ಆರಂಭಿಸಿಬಿಟ್ಟೆ. ಝುಂ ಝುಂ ಎಂದು ಬಿಡತು ಕಣಮ್ಮ. ಅದೇ ರಾತ್ರಿ ಒಂದಿಷ್ಟು ಜನ ಕರಕೊಂಡು ಬಸ್ಸು ಹತ್ತಿ ಹೊರಟೇ ಹೋದೆವು. ನನ್‌ತಮ್ಮನ ಕೈಲಿ ಹೇಳಿಕಳಿಸಿ ಊರಿಗೆ ಎಂದವನೇ ಹೋದೆ ಕಣಮ್ಮ. ಸಿಪಾಯ್‌ಗಳೋ ಅದಾರೋ ಅಲ್ಲಿ ಇರೋರು. ಅದ್ಯಾವ ದೇಶದವರೋ ಅವರು. ನಾವಿದ್ದದ್ದು ಹೋದದ್ದು ಅದಾವ ದೇಶವೋ ದೇವರು ಶ್ರೀರಾಮನೇ ಬಲ್ಲ. ಎರಡು ಮೂರು ಮೇಳಾ ಕಟ್ಟಿಬಿಟ್ಟದ್ದೂ ಉಂಟಮ್ಮ, ಬಣ್ಣ ಅಳಿ ಸದೇ, ಕಸೇಬಿಚ್ಚದೆ!-ಕಡೆಗೆ ಬಂತು ನೋಡು, ಅದೆಂತದೋ ದೇಶ, ಅಲ್ಲಿ ಮರಳು, ಮರಳು, ಮರಳೂ! ಅಲ್ಲಿ ಖಾಕಿಹಾಕೀ, ಎಂದರು ನಮಗೆಲ್ಲ. ಸರಿ ಕಣಮ್ಮ (ಹಾಕಿದೆ ಖಾಕೀ) ಈ ಫೋಟೋ ನೋಡು; ಹೀಗೇ ಇವೆ. ಗಾಮಾ ಗೀಮ, ಕಡೇ ಗರಡಿ ನಿಸ್ಸೀಮ, ಯಾರಾದರೂ ಕೈ ಮಿಲಾಯಿಸುಕ್ಕೆ ಬಂದಿದ್ದರೆ ಡಂಗ್ ಆಗಿ ಬಿಡೋರು. ಆಗ ನಾಲ್ಕು ತಿಂಗಳು ಕವಾಯಿತಿ ಕಲಿತೆ. ಬೆಹತ್ತರ್ ಬೇಟಾ, ಎಂದು ಒಬ್ಬ ಮುಪ್ಪಿನ ಮುದುಕ ಭುಜ ತಟ್ಟಿದ ನಿನ್ ಮಗ ಎಲ್ಲಿ ಹೋದರೂ ಸೋಲಲಿಲ್ಲ ಕಣಮ್ಮ.

"ಕಡೆಗೊಂದು ದಿನ ಎಲ್ಲಾ ಖಾಕೀ ಜನಾನು ಕೂರಿಸಿದರು ತಿಂಡಿ ತಿನ್ನಸಿದರು. ಸ್ವಲ್ಪ ಕೂತುಗೊಂಡು ಎಲ್ಲರೂ ಕಾಗದ ಬರೀರಿ, ಎಂದರು. ನನಗೇನು ಬರುತಿತ್ತೀ ಇಲ್ಲ. ಗುದ್ದಲಿ ಗುರುತೂ ಬರದು. ಸುಮ್ಮನೆ ಮಿಕ ಮಿಕ ನೋಡುತ ಇದ್ದೆ. ಆಗ ನಮ್ಮ ದಳವಾಯ್ರು ಬಂದು—ಇವನಿಗೆ ಹೇಳೋ ಬೇಕೂಫಾ ಬರೀತಾನೆ ಊರಿಗೆ ಕಾಗದಾನ—ಎಂದರು. ಶಿರಿಗಣಾಧಿಪತಯೇ, ಹಾಕಪ್ಪ ಎಂದೆ. ಅದಕ್ಕೆ ಎಲ್ಲಾ ಗೋಳ್ ಎಂತ ನಕ್ಕರು. ಊರ ಹೆಸರು ಹಾಕಪ್ಪ ಎಂದೆ. ಎಲ್ಲರೂ ಮತ್ತೆ ನಕ್ಕರು. ನಾನು ಸುಮ್ಮನಾಗಿಬಿಟ್ಟೆ. ಏನೋ ಬರೆದರು, ಹಾಕಿದರು. ಮಿಲ್ಟ್ರೀಲಿ ಊರು, ದೇಶ, ಜನ, ಬಣ್ಣ, ಏನೇನೂ ಗೊತ್ತಾಗುಲ್ಲ. ಭೂಮಿತಾಯಿ ಮಡಿಲಾಗೆ ಇರೋದು, ಒಳ್ಳೇದಕ್ಕೆ ಹೋರಾಡೋದು. ಇಷ್ಟೇ ಕಣಪ್ಪ—ಎಂದರು ನಮ್ಮ ಸೇನಾಪತಿಗಳು. ಸರಿ ಆಮೇಲೆ ಅಕಾಶವ್ಯಾಣ ಇದೆಯಲ್ಲ ಅದರಲ್ಲಿ ಪದ ಹೇಳಿದೆ, ಅದರಲ್ಲೇ ನಾನೂ ಮಾತಾಡಿದೆ. ಕೇಳಿದ್ದೆಯಲ್ಲ ನೀನು. ಆಗ ನಾನು ಬಲುದೂರದಲ್ಲಿದ್ದೆ. ಯಾವ ದೇಶವೋ ಕಾಣೆ! ಹಣ್ಣು ಪಣ್ಣು ಚೆನ್ನಾಗಿತ್ತು ಅಲ್ಲಿ."

ಇನ್ನೊಂದು ವಿಚಾರ ಹೇಳಲಿಲ್ಲ. ಅದೇನು ಎನ್ನು ಹೇಳುತ್ತೇನೆ. ಒಳ್ಳೆ ವಿದ್ಯ ಕಲೀಬೇಕು. ಇಷ್ಟೆಲ್ಲ ಇರುವ ನನ್ನ ನಾಜೋಕಿನ ಜೀವನಕ್ಕೆ ವಿದ್ಯ ಬೇಕು, ಎನ್ನಿಸಿತ್ತು ಕಣಮ್ಮ. ಹೇಳಿಕೊಡೋರು ತುಂಬ ಜನ ಇದ್ದರು. ನಮ್ಮ ಭಾಷೆ, ಇನ್ನೊಂದು ಭಾಷೆ, ಮತ್ತೂ ಒಂದು ಭಾಷೆ ಬರೆಯೋದೆಲ್ಲ ಕಲಿತೆ. ಯಾವುದು ಮಾಡಿದರೂ ಚೆನ್ನಾಗಿರಲಿ ಎನ್ನಿಸಿತು ಕಣಮ್ಮ. ಆಡಿದರೆ ಚೆನ್ನ, ಮಾಡಿದರೆ ಚೆನ್ನ, ಕೂಡಿದರೆ ಚೆನ್ನ, ಕುಣಿದರೆ ಚೆನ್ನ ಇರಬೇಕು ಎಂತ, ಒಬ್ಬಳು ಹೆಣ್ಣು ಹೇಳಿಕೊಟ್ಟಳು ಕಣಮ್ಮ."

"ಹಾಂ, ಏನೆಂದೆ, ಹೆಣ್ಣು ಯಾರೋ, ಮಗಾ, ಹೆಣ್ಣೊಂದರೆ?"

"ಮಿಲ್ಟ್ರೀಲಿ ಹೆಣ್ಣೂ ಎಂದ್ರೆ ಬರೀ ಹೆಣ್ಣು, ಯಾರೋ ಯಾವ ದೇಶವೋ, ನಾಕಾಣೆ ಕಣಮ್ಮ. ಅಂತು ಆ ಹೆಂಗಸು ಒಂದು ಸಾರಿ ನನ್ನ ಕಂಡು, ಕೈಸನ್ನೆ ಬಾಯಿಸನ್ನೆ ಮಾಡಿದಳು. ಸರಿ ಉಳಿದೆಲ್ಲ ಹೇಳಿ, ನಿನಗೆ ಕಷ್ಟ ಕೊಡೊಲ್ಲ. ಹೀಗಾಗಿ ಬಂದೆ ನಾನು."

"ಹೀಗೆ ಎಂದರೆ ಹೇಗೆ? ಮುಂದೇನು ಮಾಡೋದು."

"ಮುಂದಕ್ಕೆ ತುಂಬಾ ಇದೆ ಕೆಲಸ ಕಣಮ್ಮ. ಹಳ್ಳಿಯವನು ಹಿಂದೆ ಹಿಂದೆ, ಅನ್ನುವ ಮಾತು ಸುಳ್ಳು. ನಾನು ಆಡುವ ಮಾತು ಹೇಗೆ ಚನ್ನೋ ಹಾಗೇ ಮಾಡುವ ಕೆಲಸ. ಎಲ್ಲವೂ ಚೆನ್ನು, ಎಲ್ಲವೂ ಚೆನ್ನು. ಇದೇ ಹಳ್ಳೀಲೆ ಇದ್ದು ಹೊಲ, ಗದ್ದೆ, ತೋಟ, ಎಷ್ಟಾದರೆ ಅಷ್ಟು ಮಾಡೋಣ, ಹಳ್ಳಿಯವರಿಗೆಲ್ಲ ಹೀಗೆ ಹೀಗೇ ಮಾಡಿ ಎಂತ ಹೇಳೋಣ. ಅದಕ್ಕೆ ಮುಂಚೆ ಸ್ವಲ್ಪ ಕೆಲಸ ಬೇರೆ ಇದೆ."

"ಹಾಗಾದರೆ ಮಗಾ, ದೇಮವ್ವನ ಹೆಣ್ಣು ಕರತರಲಾ, ನೋಡು ತೀಯಾ, ಕಾದಿದೆ ಹೆಣ್ಣು ನಿಂಗಾಗಿ ಏನೋ ಮಗಾ ಹೊನ್ನೂರಾ."

"ಅಮ್ಮ ಹೆಣ್ಣಿನ ಮಾತು ಹೇಳಬೇಡ, ಆ ಹಂಬಲ ಹೋಯಿತು. ಹಾಗಾದರೆ ಕೇಳು—ಕತ್ತರಸಿ ಹೋದ ಕಾಲಿದೆಯಲ್ಲವ್ಮಾ ಇದರ ಮೇಲೆ, ಅದಾವುದೋ ದೇಶದಲ್ಲಿ ಹಚ್ಚೆ ಚುಚ್ಚಿಸೋಣ ಎಂತ, ಕೂತುಗೊಂಡೆ. ನನ್ನ ಸಂಗಡ ಆ ಹೆಣ್ಣು ಬಂದು ಅದೂ ಹಚ್ಚೆ ಚುಚ್ಚಿಸಿಗೊಂಡಿತು. ಶ್ರೀರಾಮ ಬಿಲ್ಲು ಬಿಡುತ್ತಾ ಇದ್ದದ್ದು ಆ ಚಿತ್ರ ನನ್ನದು. ಶ್ರೀ ಸೀತಾಮ್ಮ ಹಣ್ಣು ಕೀಳುತ್ತಾ ಇದ್ದದ್ದು ಆ ಹುಡಿಗಿ ಬರೆಸಿದ ಚಿತ್ರ. ಆ ದಿನ ಆ ರಾತ್ರಿ ನಾವಿಬ್ಬರೂ ಒಟ್ಟಿಗೆ ಇದ್ದೆವು, ಒಟ್ಟಿಗೆ ಮಲಗಿದೆವು. ಬೆಳದಿಂಗಳಲ್ಲಿ ನದಿ, ಕೊಳ, ತೋಟ, ನಾಟಕ, ಹೋಟಲು ತಿರುಗಿ ಬಂದೆವು. ಇನ್ನೂ ಏನೇನೊ........"

"ಹೇಳಿಬಿಡು, ಹೊನ್ನೂರಾ, ಇನ್ನೂ ಏನೇನೆಲ್ಲ ನಡೀತು."

"ಆಗೇನಮ್ಮ, ನಮ್ಮ ಹತ್ತಿರ, ಮೋಟಾರು ಕಾರಿತ್ತು, ಏರೋಪ್ಲೇನಿತ್ತು, ರಜಾದಿನ ಏನು ಬೇಕಾದರೆ ಅದೇ ಇತ್ತು. ಆ ದಿನ ನಾನೂ ಆ ಹೆಣ್ಣೂ ರಾಮಾ ಸೀತೆ ಆಗಿಬಿಟ್ಟೆವು. ಏನೇನೆಲ್ಲ ಏನು ಹೇಳಲಿ ನನ್ನವ್ಮಾ, ನೀನು ನಮ್ಮಪ್ಪ ಹೇಗಿದ್ದರೋ, ಹಾಗೇ ಇದ್ದೆವು. ನೀವಿದ್ದಿರಿ ಈ ಬಡತನದಲ್ಲಿ, ನಾವಿದ್ದೆವು ಆ ದೇಶದಲ್ಲಿ ಆ ವೈಭವದಲ್ಲಿ. ಕಡೆಗೆ ಬಂತಮ್ಮ ಕಷ್ಟ. ರಾತ್ರೊ ರಾತ್ರೆ ಬಿತ್ತಮ್ಮ ಬಾಂಬು. ನನಗೆ ಎಚ್ಚರವಾದಾಗ ಆಸ್ಪತ್ರೇಲಿದ್ದೆ. ಕಾಲಿರಲಿಲ್ಲ. ಎದೇಲಿ ಒಂದು ಮೂಳೆ ಇರಲಿಲ್ಲ. ಜತೇಲಿ, ಆ ನಿನ್ನ ಸೊಸೆ ಇದ್ದಳು ಕಣವ್ಮ."

"ನನ್‌ಸೊಸೆ ಯಾರೋ ಮತ್ತೆ, ನಾಕಾಣದವಳು?"

"ಅವಳೇ ಕಣಮ್ಮ ಆ ಮಿಲಿಟರಿ ಹೆಣ್ಣು, ನನ್ನ ಭಾಷೆ ಕಲಿತಿದ್ದಳು, ನಮ್ಮ ಹೆಂಗಸರದ್ದೇ ಸೀರೆ ಉಡುತ್ತಿದ್ದಳು ಒಳ್ಳೆ ಚಂದೊಳ್ಳೆ ಹೆಣ್ಣು ಕಣಮ್ಮ."

"ಹಾಗಾದರೆ, ಅವಳೆಲ್ಲಿ ಮತ್ತೆ, ಅವಳನ್ನಾದರೂ, ಕರೆತಾ ಮನೆಗೆ. ಆದರೆ ಈ ಮುಕ್ಕಿನ್ನೋಡಿ, ಎಷ್ಟು ನಗುತಾಳೋ, ಏನೋ, ಬಂದಿದ್ದಾಳಾ ನಮ್ಮಟ್ಟೀಗೆ?"

"ಅಯ್ಯೋ ನನ್ನವ್ವಾ, ಬರದೇ ಏನು, ಬರುತಾ ಇದ್ದಳು. ಆದರೆ, ಅವಳೆಲ್ಲಿದ್ದಾಳವ್ವ. ಅವಳು ಹೋಗಿಬಿಟ್ಟಳು. ಅವಳಾ ಕೂಸು ಇದ್ದು, ಬದುಕಿ, ಬೆಳೆದರೆ ಬಂದೀತು ನಿನ್ನ ಬಳೀಗೆ—ಅಜ್ಜೀ ಎಂತ ಕರೆದೀತು."

"ಅಯ್ಯೋ ನನ್ನ ಭಾಗ್ಯವೇ, ಹಿಂಗೂ ಆಗೋತೇ?"

"ಕಾಲೇ ಹೋಯಿತು. ಅದೇ ಹೋಯಿತು, ಇದೇ ಹೋಯಿತು, ಎಂತ ದುಃಖವಿಲ್ಲಾ ನನಗೆ. ದೇವರು ಕೊಟ್ಟಿದ್ದಾನೆ. ನನಗೆ ಉತ್ತಮವಾದ ತಯಾರಿ. ನನ್ನ ಹಳ್ಳಿಮುಕ್ಕನಹಾಗೇ ಹೀಗೇ ಇರು ಎಂತ—ಉಳಿಸಲಿಲ್ಲ. ಒಳ್ಳೆತಯಾರಿ ಕೊಡಿಸಿಕೊಟ್ಟಿದ್ದಾನೆ ದೇವರು ಯುದ್ಧ ಬಂದು ಏನಾದರೇನು, ಏನು ಹೋದರೂ ಸರಿ. ಇದ್ದುದರಲ್ಲೇ ಉತ್ತಮವಾಗಿ ಜೀವನಮಾಡುವುದನ್ನೇ ದೇವರು ಕಲಿಸಿದ್ದಾನೆ. ನನ್ನ ಸುಖಹೋದರೂ, ನನ್ನ ಹಳ್ಳಿಯವರ ಸುಖ, ನನ್ನ ಜನದವರ ಸುಖ, ನನ್ನ ದೇಶದವರ ಸುಖ ಊರ್ಜಿತವಾಗುವ ಹಾಗೆ ಮಾಡಬಲ್ಲೆ, ನಾನು."

"ಹಾಹಾ, ನಿಲ್ಲಿಸಪ್ಪ. ಹೊನ್ನೂರಾ. ನಿಮ್ಮಪ್ಪದೀರು ಸಾಯೋ ಮುನ್ನ ಹೀಗೇ ಆಡಿದರು. ಇದೇನೋ ನನಗೆ ಅರ್ಥವೇ ಆಗುಲ್ಲಪ್ಪ. ನಿನ್ನ ಮನೆ, ನಿನ್ನ ಸುಖ, ಸೊನ್ನೆಯಾಗಿ, ಸುಳ್ಳಾದರೆ, ಆಮೇಕಿನ್ನೇನ್! ನನ್ ಹೊಟ್ಟೆ ಉರಿಸಬೇಡ."

"ಅವ್ವಾ, ಊದುಗಡ್ಡಿ ಹಚ್ಚಿದಾಗ, ಗಂಧದ ಕೊರಡು ತೇದಾಗ, ಏನಾಗುತ್ತವ್ವ ಊರೆಲ್ಲ ಗಮ್ಮನ್ನತ್ತೆ. ಆದರೆ ಊದುಕಡ್ಡಿ ಇಲ್ಲವಾಗುತ್ತೆ. ಎಂದಾದರೂ ಹೋಗುವ ಈ ದೇಹ, ಹಾಗೇ ಸವೆದುಹೋಗಲಿ. ಧರ್ಮದ ಯುದ್ಧ, ಸತ್ಯದ ಯುದ್ಧ ಎಂತ ಮನೆಬಿಟ್ಟು ಹೊಲಬಿಟ್ಟು ಹೋಗಿದ್ದೆ. ಪರದೇಶದಲ್ಲಿ ಕಾಲೇ ಕುಯಿದುಕೊಟ್ಟು ಬಂದೆ. ನನ್ನ ಪ್ರೀತಿ ನನ್ನ ಶಕ್ತಿ ಎಲ್ಲ ಕೊಟ್ಟೆ, ಒಳ್ಳೇದೊಂದು ಹೆಣ್ಣಿಗೆ. ಆ ಹೆಣ್ಣು ಹೆತ್ತ ಮಗು

ನನ್ನ ಮನೆ ಉದ್ಧಾರಮಾಡುತ್ತಿ. ಇಷ್ಟೆಲ್ಲಾ ಆದಮೇಲೆ ಇನ್ನೇನಮ್ಮಾ ಬೇಕು."

"ಇನ್ನೇನೂ ಬೇಡಪ್ಪಾ, ನಾನು ಬದುಕಿರುವುದೇ ನಿನಗೆ ಬೇಡಾಂತ. ಮನೆದೇವರ ಮುಂದಿನ ದೀಪಾಗಾನ, ಊರು ನಡುವೆ ಇಟ್ಟುಬುಟ್ಟಿ. ನನ್ನ ಮನೆಮುಂಟಾನಾತು. ಅಯ್ಯೋ ಮನೆಗೆ ಮಾರಿಯಾದೆಯಾ ಹೊನ್ನೂರಾ !"

"ಅದೇನು ನನ್ನ ತಪ್ಪಲ್ಲ. ನನ್ನಂತವನನ್ನ ಹೆತೆಯಲ್ಲಾ ಆ ನಿನ್ನ ತಪ್ಪು. ಆದರೆ ತಪ್ಪಲ್ಲ, ಇದೆಲ್ಲ. ಇನ್ನೂ ಇದೆಲ್ಲ ದೊಡ್ಡತನದ ಮಾತಮ್ಮ, ಈ ಕಾಲು ಹೋಗಿ ಹೆಳವನಾಥ ನಿನ್ನ ಮಗನ್ನ, ನಾಸಿದ್ದಕಡೆ ಜನರೆಲ್ಲಾ ಯುದ್ಧ ಆಗೂಕಡೆ ಹೊನ್ನೂರಾ ಎಂತ ಕರೀತಿರಲಿಲ್ಲ."

"ಹಾಳೂರಾ ಅಂತ್ಲೋ, ಊರ್‌ಹಾಳಾ ಎಂತ್ಲೋ ಕರೀತಿದ್ರು ಅಲ್ಲವೆ ?"

"ಅಲ್ಲಮ್ಮ, ಹೋರ್ಹಾರ್ ಎಂತ ಕರಿಯುತ್ತ ಇದ್ದರು. ಹೋರ್ಹಾರ್ ಎಂದರೆ ಯಾರಿಗೂ ಸಾಧ್ಯವಾಗದುದನ್ನೇ ಮಾಡುವಾತ ಎಂತಲಮ್ಮ— ಅದರರ್ಥ ಹಿಂದೂದೇಶದವರು, ಕೈಲಾಗದವರು ; ಅದರಲ್ಲೂ ಹಳ್ಳಿಯು ವರು, ಯಾತಕ್ಕೂ ಬಾರದವರು ; ಹಾಗೂ ಕನ್ನಡದವರು ಹೇಗೂ ಹೀನಾಯ—ಎನ್ನುವಂಥಾ ಅವಮಾನದ ಮಾತೆಲ್ಲ ಬೂದಿಯಾಗುತ್ತೆ. ನಾನೂ ಕಂಡಿದ್ದೇನೆ—ದೇಶ ದೇಶದವರನ್ನೆಲ್ಲ—ಕೆಂಪು, ಹಳದಿ, ಬಿಳವು, ಕಪ್ಪು ಜನರನ್ನೆಲ್ಲ ! ನಾವು ಜೇನುತುಪ್ಪದ ಬಣ್ಣದವರಮ್ಮ, ನಾವೆಲ್ಲರಿಗೂ ಸಮಭುಜ ಕಣಮ್ಮ. ಹೆಳವನಾದ ನಾನು, ಹೊನ್ನೂರಾ ಅಲ್ಲ, ಹೋರ್ ಹಾರ್ ಆಗುತ್ತೇನಮ್ಮ ನನಗೆ ಕುಂದಾದರೂ ಚಿಂತೆಯಿಲ್ಲ. ನನ್ನ ದೇಶದ ಮಾನ ಕುಂದದೆ ಇರಲಿ."

"ಹೊನ್ನೂರಾ ಆದಾರೋ ಬಂದ್ರೊ. ಇನ್ನಾದರೂ ಸುಮ್ಮನಿರು ನನ್ನ ಕಂದಾ."

"ಬಂದವರೇ, ಆದಾರು, ಬನ್ನಿ, ಬನ್ನಿ, ಶಾನುಭೋಗರ ಮಕ್ಕಳೇನು ? ನನ್ನ ಮಾತು ಅರಿಯುವಂತವರು ಯಾರಾದರೂ ಸಿಕ್ಕಿಯಾರೇ ಎಂತ ಕಾದಿದ್ದೆ. ಬಂದಿರಲ್ಲ ಬನ್ರೀ, ಕೂಡ್ರೀ. ಈ ದಿನ ನಾನು, ವಿದ್ಯಾವಂತ ರಾದ ನಿಮ್ಮ ಸಮ ಬಂದಿದ್ದೇನೆ. ನೀವು ಪುಸ್ತಕ ಓದಿ ಕಲಿತಿರಿ. ನಾನು

ಗಣಪತಿಯ ಹಾಗೆ ತಾಯಿ-ತಂದೆ ಸುತ್ತಬಳಸಿ ಬರಲಿಲ್ಲ; ಷಡಾನನ ಹಾಗೆ ದೇಶ ಕೋಶ, ಖಂಡ ಖಂಡನೆಲ್ಲ ಸುತ್ತಿ ಬಳಸಿ, ಪ್ರಪಂಚ ಯಾತ್ರೆಮಾಡಿ ಬಂದೆ. ನನ್ನ ಅಭಿಪ್ರಾಯ ಕೆಲವಿವೆ. ನೀವೆಲ್ಲ ಸೇರಿದರೆ ಪರಸ್ಪರ ಸಹಾಯ ದಿಂದ ನಮ್ಮ ಹಳ್ಳಿಯವರ ಹೆಸರು ಮುಂದೆ ಬರುವಂತೆಯೂ ನಮ್ಮವರೆಲ್ಲ ಸುಖಮುಖವಾಗಿ ಬದುಕುವಂತೆಯೂ ಮಾಡಬಹುದು. ನೋಡಿ ನಾನು ಈ ಹಳ್ಳಿಬಿಟ್ಟು ದೊಡ್ಡೂರಿಗೆ ಹೋಗಿ ನನ್ನದೊಂದು ಹೊಸ ಸೃಷ್ಟಿಯಂತ್ರ ದಿಂದ ಹಣ ಸಂಪಾದಿಸಿಕೊಡುತ್ತೇನೆ. ನೀವು ಮತ್ತೆ ಇನ್ನಾರಾದರೂ ಹಳ್ಳಿಯವರಿದ್ದೀರಿ. ಅವರೆಲ್ಲ ಹಳ್ಳಿಗೇ ಬರಬೇಕು. ನಮ್ಮ ಭಾರತದೇಶದ ಹಳ್ಳಿ ಹಳ್ಳಿಯೂ ಹೇಗಾಗಬೇಕು. ಎನ್ನುವುದನ್ನು ನಾವು ಇಲ್ಲಿ ನಮ್ಮ ಹಳ್ಳಿಯಲ್ಲಿ ಮಾಡಿತೋರಿಸೋಣ. ಹಾಗೆಂದರೆ ಹಿಂದಿನದು ಮರೆಯದೆ, ಮುಂದಿನದುಬಿಡದೆ, ಹಿಂದಿನ ಮರದಲ್ಲಿ ಇಂದಿನ ನಾಗಸಂಪಿಗೆ ಹೂ ಅರಳಲಿ........"

"ಹೊನ್ನೂರಾ ಇನ್ನೂ ಯಾರೋ ಬಂದರು, ಅಂಗಳಕ್ಕಾದರೂ ಹೋಗೋ........"

ಓಹೋ, ಬನ್ನಿರಿ. ನಮ್ಮ ಹಳ್ಳಿ ಮೇಳದವರೆಲ್ಲ ಬಂದರು. ಬಾರೈಯ್ಯಾ ನೀನಲ್ಲವೆ ಸೀತಾವೇಶದವನು, ನೀನೇ ಸುಗ್ರೀವನಾಗಿದ್ದೇ, ನೀನು ರಾವಣ ನಾಗಿದ್ದೇ—ಅಲ್ಲವೇನ್ರಯ್ಯಾ ? "

"ಏನೋ ಹೊನ್ನೂರಾ, ಈ ರಾತ್ರಿ ಮೇಳಾಕಟ್ಟೋಣೇನೂ, ಇನ್ನೇನು, ನೀನು ನಮ್ಮ ಊರೇಬಿಟ್ಟು ದೊಡ್ಡೂರಿಗೇ ಹೋಗುತ್ತೀಯಂತೆ. ನಿನ್ನ ಬುದ್ಧಿ, ನಿನ್ನ ಸಂಬಳ, ನಿನ್ನ ಆಸ್ತಿ, ಎಲ್ಲ ಹೆಚ್ಚಾಯಿತಲ್ಲಪ್ಪ, ಬೆಳಕು ಮನೇಬಿಟ್ಟು ಹಳ್ಳಿ ಚೌಕಕ್ಕೇ ಗರುಡಗಂಭದ ಮೇಲಿನ........"

"ಹೌದು, ಭಾಗೋತಪ್ಪ, ನಿಮ್ಮಾಶೀರ್ವಾದ ಎಲ್ಲ. ಏನು ಕಲಿತರೂ, ಏನು ಪಡೆದರೂ, ನಿಮ್ಮ ಕೈನಾಡದ್ದು ಈ ಪಾತ್ರೆ. ಈ ದಿನ ಬೆಳದಿಂಗಳಲ್ಲಿ ಮೇಳ ಕಟ್ಟಿತಾರಂತೆ ನನ್ನ ಮಾತು ಸ್ವಲ್ಪ ನೋಡಿ ಸರಿಯೋ ಹೇಗೆ........ —ಪೊಡವಿಯೊಳ್ ಘೋರಾಬ್ಧಿ, ವಡೆಯ ರಂಗೇಶನ, ಮಡದಿಯ, ಹಿಡಿದ ಫಲ ನೋಡೋ! ಎಲೊ ರಾವಣ! ಅಡಿಗಡಿಗೆ ಕಡುಪರಾಕ್ರಮಿಯಂತೆ! ಮಾತನಾಡಬೇಡ! ಎಲೋ ರಾತ್ರಿಂಚರನೆ, ಪೊಡವಿಯೊಳು ಘೋರಾಬ್ಧಿ

ಪುರಿ ರಂಗನಾಥನ ಮಡದಿಯನ್ನು! ತರಿದಫಲವೋ, ಇಷ್ಟಾಯಿತು! ಎಲೋ ಭ್ರಷ್ಟ ಇದನ್ನರಿಯದೆ, ದುಷ್ಟಮಾತುಗಳಾಡುವ ಪಾಪಿಷ್ಠನೆ ನಿಲ್ಲು ಯುದ್ಧಕ್ಕೆ! ಎಲೋ ಧಡಿಗ ರಕ್ಕಸನೆ, ಈಗಲೆ ನಿನ್ನನ್ನು ಕೊಂದು ಯಮ ಲೋಕಕ್ಕೆ ಕಳುಹಿಸುವೆ! ನೋಡೋ, ಪರಮಭ್ರಷ್ಠ ಪಾಪಿಸ್ಠ........ —ಇಷ್ಟೇನೂ ಬರುತ್ತೆ ಆದರೆ, ಅವರೆ ಯುದ್ಧದ ಕುಣಿತಕ್ಕೆ ಸ್ವಲ್ಪ ತೊಂದರೆ."

"ಅದನ್ನ ಇನ್ನು ಯಾರಾದರೂ ಮಾಡಿಬಿಡತಾರೆ. ರಾಮನ ಬದಲು ಲಕ್ಷ್ಮಣ ಕುಣೀಲಿ. ಕುಣಿತಕ್ಕೆ ತಕ್ಕ ಕುಣಿತ ಇದ್ದಹೊರತೂ, ಅಟ್ಟಲು ಕಟ್ಟಿದ್ದಕ್ಕೆ ಇಷ್ಟಾರ್ಥವಾಗುಲ್ಲ ಅದಿರಲಿ ನಮ್ಮಪ್ಪ, ಹೊನ್ನೂರಪ್ಪ, ನೀನು ಹಳ್ಳಿಯವನಾಗಿದ್ದೀ ಎಂತ ಯಾರೂ ಹೇಳಲಾರರು. ಆದರೂ ನಿನಗಂತೂ ಗೊತ್ತಪ್ಪ."

ಏನು, ಭಾಗೋತಪ್ಪ?"

"ಏನೋ ಯುದ್ಧದ ನೆವದಿಂದ, ಈ ಹಳ್ಳೀ ಬಳ್ಳೀ, ನಗರಕ್ಕೆಲ್ಲ ಹಬ್ಬಿ ಹೂವು ಹಣ್ಣು ಕೊಡುತ್ತೆ ಎಂತ."

"ಎಲ್ಲ ನಿಮ್ಮ ಆಶೀರ್ವಾದ, ಭಾಗೋತಪ್ಪ. ಆಗಲಿ ಗದ್ದೇಲಿ ಮಡಿಕೆ ಮಾಡುತಿದ್ದೆ, ಈಗ ಬುದ್ದೀಲಾದರೂ ಮಡಿಕೆಮಾಡಿ ಏನಾದರೂ ಕೈಗಾರಿಕೆ ಬೀಜ ಬಿತ್ತೋಣ ಎಂತ ಮನಸ್ಸು."

"ಆಗಲಿ ಹೊನ್ನೂರಾ! ಹಾಗೇಮಾಡು."

## ೭. ಸುರುಗಿ

“ನಾನೇನು ಉಸಿರೇ ಬಿಡಬೇಡವೆ ?”

“ಎರಡು ದೇಹ ಒಂದಾಗಿದೆ ಉಸಿರೂ ಒಂದೇ ಆಗಲಿ !”

“ಭಾರಿ ಗುಂಗೇ ಹುಳು ತೀರ ಸಣ್ಣದೊಂದು ಸುರಗೀಗೆ ಎರಗಿ....”

“ಸುರಗೀಗೆ ಎರಗಿದ ಹಾಗೆ, ಅವಚಿದ ಹಾಗೆ, ರಸ ಹೀರಿದ ಹಾಗೆ..”

“ಈಗ ಮಾಡೂ ಹಿಂಸೆ ನೆನಪಿರಲಿ, ನಡುಹಗಲು ಎಂತ ಭಯವಿಲ್ಲವೆ ? ಎಂತ ಯಾರಾದರೂ........”

“ಯಾರೂ ಬರುವುದಿಲ್ಲ ಈ ದಿನ ಅದೂ ಈಗ ; ಗೋಪುರದ ಹೆಬ್ಬಾಗಿಲು ಹಾಕಿ, ಅಗುಳಿ ಭದ್ರಮಾಡಿ ಬರಲೇನು ? ನೀನು ಆ ಕಡೆ ತಿರುಗಿ ಹೋಗಿ ಜಾನಕೀರಾಮನ ಬಳಿ ನಿಂತರು....”

“ನಾನೇ ಬಾಗಿಲು ಭದ್ರಮಾಡಿ ಬಂದಿದೇನೆ. ಇಲ್ಲಿ ಬನ್ನಿ ಪೂಜಾರ್ರೇ ಈ ದಿನಕ್ಕೆ ಇಷ್ಟೇ ಸಾಕು. ನಾನು ಒಂದು ವಿಷಯ ಹೇಳಿಹೋಗುವದಕ್ಕೆ ಬಂದೆ. ಆ ಮಾತು ನಿಮ್ಮ ಕಿವಿಯಲ್ಲೀಂದೆ....”

“ಆಗಲಿ ಕಿವಿಯಲ್ಲೇ ಹೇಳು. ಇಲ್ಲಿ ಬೇಡ. ಗರ್ಭಗುಡಿಯಲ್ಲಿ ಹೇಳುವೆಯಂತೆ.”

“ನಾನು ಅಲ್ಲಿಗೆಲ್ಲ ಬರುವುದಿಲ್ಲ. ಈಚೆಗೆ ನಿಮ್ಮ ವ್ಯಾಮೋಹ ಹೆಚ್ಚಿದೆ.”

“ಬಾ ಎಂದರೆ ಬರಬೇಕು.”

“ಹೂ ಬಂದೆ. ಇದೇನಿದು ಹೊಸದಾಗಿದೆ? ಅದೇನು ದೇವರ ಕೈಲಿ ?”

"ಅದು ಗೌಡರ ಭಕ್ತಿ. ಬೆಳ್ಳೀ ಕೊಳಲು!''

"ಅದು ತೆಗೆದುಕೊಡಿ. ನಾನು ಕೊಳಲೂದಿ ನಿಮಗೆ...."

''ನಿನಗೆ ಕೊಳಲೂದುವ ಅಭ್ಯಾಸ?''

''ನನ್ನ ತಂದೆ ಕಲಿಸಿಕೊಟ್ಟಿದ್ದರು. ಅದೆಲ್ಲ ಕತೆ ಇನ್ನೊಂದು ದಿನ."

"ಹಾಗಿದ್ದರೆ ಇನ್ನು ಮೇಲೆ ಈ ಬೆಳ್ಳಿ ಕೊಳಲು ನಿನಗೆ ಆ ಬಿದುರಿಂದು ನನಗೆ. ನಾನು ಕೊಳಲೂದಿದರೆ ನಿನಗೆ ಸಂಕೇತ ಅಲ್ಲವಾ?"

''ಇಷ್ಟು ದಿನವೆಲ್ಲ ಬೇಕಾಗಿತ್ತು ಸಂಕೋಚ, ಸಂಕೇತ, ವಿರಹ, ಬೇಟ ಮೊದಲಾಗೆಲ್ಲ. ಈಗವೆಲ್ಲ ಬಿಟ್ಟು ಬಂದ ಊರುಗಳಾಗಿವೆ. ಇರಲಿ ಅನಂತರ............''

"ಅವೂ ಬೇಕಾಗುತ್ತೆ ಇನ್ನು ಮುಂದೆ. ಕೊಳಲಿಗೆ ಕೊಳಲೇ ಉತ್ತರ ಕೊಡಲಿ.''

''ನನ್ನ ಕಿವಿ ಮಾತಿಗೆ ಮುಂಚೆ ಕಾಣಿಕೆ ಅರ್ಪಣೆಯಾಗಲಿ.''

''ಹಾಗೆಂದರೆ? ಓಹೋ ಮರೆತಿದ್ದೆ ಹಿಡಿ! ಒಂದು ಸಾಕಲ್ಲ!''

''ಎಲ್ಲಾ ಕಡೆ ಮುತ್ತಿಗೆ ಮೂರು ಸಾವಿರ, ಇಲ್ಲಿ ಮಾತ್ರ.''

''ಮುತ್ತನ್ನೂ ಕೊಂಡುಕೊಳ್ಳಬೇಕೆ?''

''ನೀವು ಆರಿಸಿದ ಮುತ್ತಿಗೆ ಈಗ ಕಾಣಿಕೆ ಹತ್ತು ಇತ್ತು, ಅತ್ತ ಹೋಗಿ.''

''ಓಹೋ! ಮುತ್ತು ಕೊಡೋನೂ ನಾನೇ. ಬೆಲೆ ಕೊಡೋನು ನಾನೆ........ಅದೇಕೆ ಮಾತಿಲ್ಲ. ಈಗ ಹತ್ತು ರೂಪಾಯಿ ಬೇಕೂನ್ನು ಈ ದಿನದ ಕಾಣಿಕೆ ಅಷ್ಟು ಬಂದಿಲ್ಲವಲ್ಲ. ಅಯ್ಯೋ ಮುರಳೀಧರ! ಭಕ್ತರನ್ನ ಕರೆಸಿಕೊ ಎಂದರೆ ಕರೆಸಿಕೊಳ್ಳುವುದೇ ಇಲ್ಲ. ಈ ದಿನ ಭಾರಿಯಾಗಿ ಬಂದ ವರು ಒಬ್ಬರೇ ಒಬ್ಬರು ಅವರೂ ಕಾಣಿಕೆ ವಸೂಲಿಯುವರು........ಕೊಡುವ ವರಿಲ್ಲ! ಏನು ಗತಿ!"

''ಹೊರಟೆ! ಹಾಗಾದಗೆ....''

''ರಾತ್ರಿ ಬೆಳದಿಂಗಳಲ್ಲಿ ಬಾ. ಪುನಹಾ!"

"ಒಂದು ವೈಲಿ?''

"ಹೆಳ್ಳದ ಮಗ್ಗುಲಲ್ಲಿ ಬಂದರಾಯಿತು. ರಾತ್ರಿ ಭರ್ಜರಿ ಮೇಳ ಇದೆ ಎಲ್ಲ ಕೇಳಿಕೊಂಡು, ನನ್ನ ಸಂಗಡ ನಿನಗೆ ಬೇಕಾದ ಹಾಗೆ ಇದ್ದು. ಹೋಗುವವರ ಹಿಂದೆ ಹೊರಟು ಹೋಗು. ಜೊತೆಗೆ ಜೊತೆ ಇರುತ್ತೆ. ಈ ಮೇಳವಾದ ಮೇಲೆ ಒಲವಿನ ಒಂದೊಂದು ಚೀನೀ ಮುತ್ತಿಗೂ ಹತ್ತು ಹತ್ತು ರೂಪಾಯಿ ಬೆಲೆ ಕೊಡುವೆ ಆ ಮೇಲಿನ ಮಾತು ಆಮೇಲೆ!"

"ಆಹಾ! ನಾನೇನು ಕೊಳ್ಳಬೇಕಾಗಿದ್ದಿಲ್ಲ. ಚೀನೀ ಮುತ್ತು!"

"ನನಗೆ ಬೇಕಲ್ಲ!"

"ಬೇಕಾದರೆ, ರಾಮೇಶ್ವರದ ಹತ್ತಿರ ಹೋಗಿ ಸಮುದ್ರ ಮುಳುಗಿ ಚಿಪ್ಪು ತಂದು........" ಹೀಗೆ ಹೇಳಿದ ರೂಪಾ ಗುಡಿಯನ್ನು ಬಿಟ್ಟು ಸರಸರನೆ ಹೊರಟೇ ಹೋದಳು. ಚಿತ್ತು ಪೂಜಾರಿ ಗೋಪುರ ನೋಡುತ್ತ ನಿಂತುಬಿಟ್ಟ.

ಸಂಜೆಗೆಂಪು. ಬಿರಿಯುತ್ತ ಇರುವ ಮಲ್ಲಿಗೆ ಮೊಗ್ಗುಗಳ ಕಂಪು. ಬೀಸುವ ಗಾಳಿಯು ಬಿದಿರು ಮಳೆಯಲ್ಲಿ ಹೊಕ್ಕು ಬಳಸಿ ಬರುವ ಇಂಪಿನ ಧ್ವನಿ. ಭರಭರನೆ ಮೆಟ್ಟಲು ಇಳಿದು ಹೋಗುವ ರೂಪಾ. ಅವಳ ಸೆರಗು ಹಿಂದೆ ಹಿಂದೇ ಹಾರಿ ನಿಲ್ಲುವ ಆಸೆಯಿಂದಿದೆ. ಚಿತ್ತನ ವಲ್ಲಿಯೂ ಗೋಪುರ ಬಾಗಿಲಿನಿಂದ ಹೊರಗೆ ಹಾರುತ್ತಿದೆ. ಚಿತ್ತು ಮನಸ್ಸು ಹೇಗೋ ಹಾಗೇ ರೂಪಾ ಮನಸ್ಸು. ಅವೆರಡು ಮನಸ್ಸುಗಳೂ ಸದಾ ಒಟ್ಟಿಗೆ ಇರಲು ಬಯಸುತ್ತವೆ ಹೂವೆರಡಾದರೂ ತೊಟ್ಟು ಒಂದೆ; ಅಥವ ಗುಡಿಯನ್ನು ಬಿಟ್ಟು ಹೊರಗೆ ಹೋಗಲಾರದಿದ್ದ ಚಿತ್ತು ಪೂಜಾರಿಯೇ ಹೂವು, ಮತ್ತೆ ರೂಪಾದೇವಿಯೇ ಭ್ರಮರವಾಗಿದ್ದಳು. ಇವರೀರ್ವರೂ ಐದಾರು ತಿಂಗಗಳಿಂದ ಇಲ್ಲಿ ಸೇರುತ್ತಿದ್ದಾರೆ.

೨

ಆರಾತ್ರಿ ಮೇಳ ನೋಡುವುದಕ್ಕೆ ಹಳ್ಳಿಗಳಿಂದ ಜನ ಬಂದಿದ್ದರು. ಮಹಾ ಕುಣಿತ, ಆಧ್ವರಿಯ ಕೂಗಾಟ, ರಾಳದ ಭುಗಿಭುಗಿಲು ಬೆಳಕು, ಶಾಹಬ್ಬಾಸ್‌ಗಳ ಸುರಿಮಳೆ-ಹೀಗೆ ಅಪರೂಪದ ಮೇಳ ನಡೆಯುತ್ತಿರುವಾಗ ರೂಪಾದೇವಿ ತನ್ನ ಕತೆಯ ಆದ್ಯಂತವೆಲ್ಲ ಚಿತ್ತುಪೂಜಾರಿಗೆ ಹೇಳಿಬಿಟ್ಟಳು.

"ಕೇಳು ಮತ್ತೆ ನನ್ನ ಚಿತ್ತದ ಚಿತ್ತೂ ಪೂಜಾರಿ ಏಕವಚನದಲ್ಲಿ ನಾನು ಮಾತಾಡುವುದು ನಿನ್ನ ತೊಡೆಯ ಮೇಲಿದ್ದಾಗ ಮಾತ್ರ. ನನಗೆ ಯಾರಲ್ಲಿ ಅತೀವ ಪ್ರೇಮವೋ ಅವರನ್ನು ಮಾತ್ರ ನಾನು ಏಕವಚನದಲ್ಲಿ ಕರೆದು, ನನ್ನ ಹೃದಯದಲ್ಲಿ ದೇವರಾಗಿ ಪ್ರತಿಷ್ಠೆಮಾಡಿಕೊಳ್ಳುತ್ತೇನೆ. ನಾನಾಗಿ ಒಲಿದು ನಿನ್ನ ಬಳಿಗೆ ಬರಲು ಮೊದಲು ಕಾರಣ-ನೀನು ಬ್ರಹ್ಮಚಾರಿಯಾಗಿರುವುದು. ನಿನ್ನ ಬ್ರಹ್ಮ ಚರ್ಯವನ್ನು ನಾನು ಒಮ್ಮೆ ಮಾತ್ರ ನೀಗಿಸಿಬಿಟ್ಟೆ. ಅದೇ ನನ್ನ ಹೆಮ್ಮೆ. ಇರಲಿ! ನೀನು ಅನಂತರ ನನ್ನ ಮನಸ್ಸನ್ನು ಅರಳಿಸಿ ರಸಹೀರಲಾರದಾದೆ. ಇನ್ನು ಮುಂದೂ ಸಾಧ್ಯವಾಗದು ಅದು ನಿನಗೆ. ಅನಂತರದ ಕತೆ ಕೇಳು! ನಾನು ಈ ನನ್ನ ಹಳೆಯೂರಿಗೆ ಬಂದು ಸೇರುವುದಕ್ಕೆ ಒಂದು ಕಾರಣವಿದೆ. ಇಲ್ಲಿ ನನ್ನ ಬಲ್ಲವರು ಯಾರೂ ಇಲ್ಲ. ಅವರೆಲ್ಲ ಪಾಪ, ಸಾಧುಜನ, ನಾನು ಸತ್ತೆನೆಂದು ತಿಳಿದಿದ್ದಾರೆ. ಹೆಸರು ಬದಲಾಯಿಸಿಕೊಂಡು, ಇಲ್ಲಿಗೆ ಬಂದು, ಬಿದಿರುಮಳೆ ನಡುವಿನ ದೆವ್ವದ ಮನೆಯಲ್ಲಿ, ಇರುವುದು ಯಾರಿಗೂ ತಿಳಿಯದು.

"ಹಾಗಾದರೆ ನಾನೇಕೆ ಬಂದೆನೆಂದು ಕೇಳುವಿಯಾ? ನೀನಾಗಿ ಕೇಳಿದ್ದರೆ ನಾನು ಹೇಳುತ್ತಿರಲಿಲ್ಲ. ಈಗ ನಾನಾಗಿ ಹೇಳುತ್ತಿದ್ದೇನೆ. ಕೇಳಿಬಿಡು, ಇನ್ನೊಮ್ಮೆ ನಾನು ಹೇಳುವುದೂ ಇಲ್ಲ, ನನ್ನ ನಿಲ್ಲಿಸಿ ಹೇಳೆಂದು ಕೇಳುವ ಧೈರ್ಯ ನಿನಗೂ ಇರುವುದಿಲ್ಲ. ಕಾರಣವೇನೆಂದು ಈಗ ಕೇಳಬಾರದು. ಈಗ ಅದೆಲ್ಲ ಭವಿಷ್ಯತ್ತಿನ ಗರ್ಭದಲ್ಲಿದೆ.

"ಅಯ್ಯೋ! ಮರೆತಿದ್ದೆ. ಕೇಳು ಹೇಳುತ್ತೇನೆ. ಕೋಳೂರಲ್ಲಿ ಒಬ್ಬನಿದ್ದ ದೊಡ್ಡ ಸಾಹುಕಾರನ ಪುತ್ರ ಅವನೇ ನನ್ನ ಮದಿವೆಯಾದವನು: ಗಾಬರಿಯಾಗಬೇಡ. ಅವನು ಇನ್ನೂ ಬದುಕಿದ್ದಾನೆ. ಚಿತ್ತುವೇನು ಅಂಜಬೇಕಾದ್ದಿಲ್ಲ. ಆತನು ನನಗಾಗಿ ಇನ್ನೂ ಹಂಬಲಿಸುತ್ತಾನೆ. ಹಾಗೆಂದು ನಿನ್ನ ಬಿಟ್ಟು ಹೋಗುವುದಿಲ್ಲ. ಆತನು, ಆ ಕೋಳೂರ ಸಾಹುಕಾರನು, ಬೊಂಬಾಯಲ್ಲಿ ಇದ್ದಾನೆ. ಬೇರೆ ಹೆಣ್ಣು ಮದಿವೆಯಾಗಿ, ಆಕೆಯಲ್ಲಿ ಬೇಸರಗೊಂಡಿದ್ದಾನೆ. ನಾನು ಆತನನ್ನು ಕಾಯಾಮನಸಾ ಮುಟ್ಟುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದೇನೆ! ಈಗ ಚಿತ್ತುವಿಗೆ ಆನಂದವಾಗಿರಬಹುದೊ?

"ಆದರೆ ಆತನ ಆಸ್ತಿಯನ್ನೆಲ್ಲ ವಹಿಸಿಕೊಳ್ಳುವ ಸಂತಾನಕ್ಕಾಗಿ, ನಾನು ನನ್ನಿಚ್ಛೆಯ ಮನುಷ್ಯನಿಗಾಗಿ ದೇಶ ದೇಶ ತಿರುಗಿದೆ. ಇದು ಆಸೆಯಲ್ಲ ಹಟ. ನನ್ನ ಪ್ರತಿಜ್ಞೆ. ಹೆಂಗುಸಾದವಳಿಗೆ ಅದು ಸಲ್ಲದಲ್ಲವೆ? ನಿಜ ನಮ್ಮ ದೇಶದ ಹೆಂಗುಸರಿಗೆ ಸಲ್ಲದು. ಗಂಡಸರೇನೆಮಾಡಲಿ ಹೆಂಗಸು ಅದೆಲ್ಲ ಸಹಿಸಿಕೊಂಡು ಸಾಧುಜನವಾಗಿರಬೇಕು. ಹಿಂದು ಸ್ಥಾನದಲ್ಲೆಲ್ಲ ತಿರುಗಿದೆ ನಾನು, ಅನೇಕ ಜನಗಳನ್ನು ಕಂಡೆ-ಗಂಡುಸಿನ ವೇಶದಲ್ಲಿ. ಅವರ ಸಂಗಡ ಬೆರತೆ. ನನ್ನವೇಶ, ಬಾಷೆ, ನಡತೆಯೆಲ್ಲ ಈಗ ಇಡಿಯ ಭಾರತದ ರಸರೂಪವಾಗಿದೆ.

"ಇನ್ನೂ ಏನೇನೋ ಆಸೆಗಳಿವೆ. ಅವುಗಳಲ್ಲಿ, ಕೆಲವು ಗೋಸಾಯಿಯಾಗುವ ನಿನ್ನಿಂದಲೂ, ಇನ್ನು ಕೆಲವು ನಿನ್ನ ಪ್ರಸಾದದಿಂದಲೂ, ಫಲಿಸಬೇಕು. ನೀನು ಗೋಸಾಯಿಯಾಗುವುದಿಲ್ಲವೆ? ಆಗುತ್ತೀಯೆ ನನಗಾಗಿ! ಅದನ್ನು ನಾನು ಬಲ್ಲೆ. ನನಗೋಸುಗ ಈ ಗುಡಿಯಲ್ಲಿಯೇ ಇನ್ನೂ ಅನೇಕ ಏರ್ಪಾಡುಗಳನ್ನೂ ಮಾಡಬೇಕಾಗುತ್ತೆ. ಇನ್ನು ಮೇಲೆ ನನಗಾಗಿ ನೀನು ಹೆಚ್ಚು ಸಂಪಾದಿಸಬೇಕು, ನೆನಪಿರಲಿ........

"ಇನ್ನು ಕುಳಿತಿರಲಾರೆ ನಿನ್ನ ತೊಡೆಯ ಮೇಲೆ, ಸ್ವಲ್ಪ ಹೊತ್ತು ಮಲಗಿರುತ್ತೇನೆ. ಬಹಳ ಆಯಾಸವಾಗಿದೆ. ನಡೆದುಬಂದು ಬಳಲಿದ್ದೇನೆ. ಈಗ ಮಾತಾಡಿ ಸೋತುಹೋದೆ. ನಾನು ಆಗಲೆ ಹೇಳಿಬಿಡುವೆನೆಂದಿದ್ದ ಗುಟ್ಟು ಈಗ ತಿಳಿಯಿತೆ,........ಸರಿ ತಿಳಿದಿದ್ದಮೇಲೆ, ಅದಕ್ಕಾಗಿ ನಾನು ಪದೇ ಪದೇ ಇಲ್ಲಿಗೆ ಬರಲಾರೆ. ನೀನೇ ಒಂದೆರಡುವಾರ ಬಂದು ಹೋಗು. ಅನಂತರ ನನಗೆಲ್ಲಿಯಾದರೂ ಜಾಗಮಾಡಿಟ್ಟು, ನನ್ನ ಕಾಪಾಡಿಕೊ. ಅನಂತರ, ಅನಂತರ........ನಾನು ಈ ವಾತ್ಸಲ್ಯದ ಕಷ್ಟಗಳಿಂದ ಪಾರಾದ ಮೇಲೆ ಉಳಿದ ವಿಚಾರ........"

ರೂಪಾದೇವಿ ತಾಯಿಯಾಗುವ ಸಮಯ ಬಂತು. ಅದಕ್ಕಾಗಿ ಏನೇನೆಲ್ಲ ಏರ್ಪಾಡು ಮಾಡಬೇಕಾಗುತ್ತೊ ಅದನ್ನೆಲ್ಲ ಮಾಡಿಕೊಳ್ಳುತ್ತ ಬರಬೇಕಾಯಿತು. ಅದಕ್ಕೆಲ್ಲ ತುಂಬಾ ಹಣ ಬೇಕೆನ್ನಿಸಿತು. ಈ ದೇವಸ್ಥಾನದ ಆಶ್ರಯ ಬಿಟ್ಟರೆ ಬೇರೆ ಉಪಾಯವಿರಲಿಲ್ಲ. ಆದುದರಿಂದ ಆರಂಭವಾಯಿತು. ಹೊಸರೀತಿ, ಹೊಸಪರಿ ಕಂಡದ್ದೆಲ್ಲ ಜನಗಳಲ್ಲಿ!

ಗೋಸಾಯಿಯಲ್ಲಿ ಅಲ್ಲ. ಈತನಲ್ಲಿ ಕಂಡದ್ದು ಹೆಚ್ಚಿನ ಮೌನ, ಪೂಜೆಯಲ್ಲಿ ಹೆಚ್ಚಿನ ಆಸಕ್ತಿ; ಮತ್ತೆ ಬಟ್ಟೆಯ ಬಣ್ಣದಲ್ಲಿ ವ್ಯತ್ಯಾಸ.

೩

"ಪೂಜಾರಯ್ಯ, ಬೋ ತಪಸಾ ಮಾಡುತಾನೋ, ಏನು ಮಹಿಯೋ........"

"ನಿಜ ಕಳ್ಲ. ಅದೆಲ್ಲ ತಪಸ್ಸು, ಜಾನ, ಜಪ,—ದೇವರು ಒಲಿದಾನ........"

"ಒಲೀದೆ ಏನ? ಮೊನ್ನೆಜಿನ, ನೋಡಿದೆ ಕಳ್ಲ, ಆ ಗೋಪಾಲ ಕಿಟ್ಣ, ಏನು ಚಂದುಳ್ಳೀ ಹೆಚ್ಣಾಗಿತ್ತೋ ಆ ಮೋಹಿನೀ ಆಟಜ್ಜಿನ........"

"ಹೌದ್ಲ, ನಾನಂತೂ ಒಂದು ಕುರಿ, ನಾಕು ಮೇಕೆ, ಮೂರಿದ್ದುಡ್ಡೆಲ್ಲ ಕಾಣಿಕೆ ಆಕಬುಟ್ಟಿ."

"ನಾನೂ ಹಾಕಬೇಕ್ಲ, ಅತ್ಾ, ನನ್ನ ಕೆಂದಾಕ್ಳ ಕೊಟ್ಟುಬಿಡ್ಲಾ, ಅದು ಈದಿದೆ ಕಳ್ಲ. ಬೆಣ್ಣೆ ಗೋಪಾಲಂಗೆ ಆಲಲ್ಲೀ ತಾಣಮಾಡಿಸಲೇಳು. ಹಾ, ಕೊಟ್ಟು ಬುಡ್ಲ? ನನ್‌ಹೆಂಡರು ಕೊಡು ಅಂತಾಳೆ. ಅದಕ್ಕೆ ಹರಸಿ ಕೊಂಡಮೇಲಂತು, ಹೊಟ್ಟೇಲೇನೋ ಹರಿದಹಾಗೇ ಆಗುತ್ತಂತೆ, ಆ ಮುಕ್ಕಂಗೆ........"

"ಹಾ, ತಿಳೀತಪ್ಪ ತಿಳೀತು. ನೀನೂ ಮಕ್ಕಳ ಕೊಡು ಎಂತ ಕೇಳುತಿದ್ದಿ........ಎಲಾ ಕಳ್ಳ. ಗಂಡಂತೆ........ಏನಾ........ಗಂಡಾ........ ಬಿಡಾ ನೀನೂ, ನನಗೆ, ನಾಚಿಗೆ ಆಗತತೆ........"

"ಹೆಣ್ಣಾ ನೀನೇನು? ಅದಿರಲಿ, ಅದ್ಯಾರಾರೋ ದೂರದೋರೆಲ್ಲ ಬತ್ತಾರಂತೆ........"

"ಸಾಮಿ ಸೇವೆಗೆ? ಬರಲಿ ಬುಡು. ನಮ್ಮೂರ ಗುಡಿ ಪಾವನ ಆತುಅನ್ನು. ಬಸರಿ, ಬಾಣಂತಿ, ಕಾಯಿಲೆ, ಕಸಾಲೆಯೋರೆಲ್ಲ ಬರುತಾರೆ, ಗುಡಿಗೋಪಾಲ ನಿನ್ನಡಿಯೇ ಗತಿ—ಎಂತ........"

"ಬಂದೋರಿಗೇನಾದರೂ ಬ್ಯಾಡವ, ಕೂರಾಕ್ಕೆ, ನಿಲ್ಲಾಕ್ಕೆ........"

"ಚಿತ್ತೂ ಪೂಜಾರಿ ಕಟ್ಟಿಸ್ತಾನೇನೋ ಒಸಾ ಒಸಾ ಮಂಟಪ ಸಿಂಟಪ ಗಾರೆಗಚ್ಚಿನಾಗೆ!

"ಕಟ್ಟಿಸ್‌ಲಿ ಬುಡೋ. ಅದಕ್ಕೇಂತ ಗೋಸಾವಿ ಆದ....ಕಟ್ಟಿಸ್‌ಲಿ ಬಿಡು. ನಾವೂನೂ ನೋಡಾನ, ನುಡಿಯಾನ, ಪದಾಕಟ್ಟಿ ಕುಣಿಯಾನ."

೪

ಗಿರಿಗೋಪಾಲನಿಗೆ ಜಾವ ಜಾವದ ಅಲಂಕಾರಗಳು ಬಹಳ ನಡೆದವು. ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವಗಳು ಬಹಳ ವಿಜೃಂಭಣೆ ಯಿಂದ ನಡೆದವು. ಚಿತ್ತು ಪೂಜಾರಿಯು ವೈದುಂಬದ ದಿನವಿಲ್ಲ. ದೇವರು ಕಣಿಹೇಳದ ದಿನವಿಲ್ಲ. ರಾತ್ರಿ ಹಗಲು ಗದ್ದಲವೋ ಗದ್ದಲ. ದೇವರು ಇಲ್ಲೇ ಬಂದು ನೆಲಸಿದನೋ ಎನ್ನಿಸಿತು ಸುತ್ತು ಹಳ್ಳಿಯ ಜನರಿಗೆ. ಕೆಲವ ರೆಂದರು ಹೀಗೆ—"ಪೂಜಾರಪ್ಪ, ನಿಮ್ಮ ದಮ್ಮಯ್ಯ ಇಷ್ಟೆಲ್ಲ ಹಚ್ಚಿಗೋ ಬೇಡಿ ಈ ದೇವರನ್ನ. ಹಿಂದೆಲ್ಲ ಯಾರು ಯಾರು ಯಾರೋ ಪಾಳ್ಳೇಗಾರರ ನ್ನೆಲ್ಲ ಕುಣಿಸಿ ಕೈ ಬಿಟ್ಟಿದಾನೆ ಈ ಕೊಳಲು ಕೃಷ್ಣ, ನೀವು ನಿಧಾನಿಸಿ ನಿಮ್ಮ ದಮ್ಮಯ್ಯ. ದೊಂದಿ ದಗದಗಾ ಉರಿಸಿ ಜೀವದೆಣ್ಣೆ ಎಲ್ಲ ಉರಿಸಿ ಮುಗಿಸಿ ಬಿಡಬೇಡಿ ನನ್ನಯ್ಯ, ಸಣ್ಣಗೆ ನಂದಾದೀಪಾನೇ ಸಾಕು ನಮಗೆಲ್ಲ."

ಯಾರ ಮಾತೂ ನಡೆಯಲಿಲ್ಲ. ಅಧ್ವರಿಯಾಗಿ ನಡದೇ ನಡೆದವು ಗೋಪಾಲನ ಮಹಿಮೆಯ ಉತ್ಸವಾದಿಗಳು. ನಡುರಾತ್ರಿ, ಮಧ್ಯಹಗಲು, ಬೆಳಗಿನ ಜಾವ, ಮತ್ತೆ ಆಗ ಈಗ, ದೇವರು ಸಂಚಾರಕ್ಕೆ ಹೋಗುವನೆಂದು ಚಿತ್ತು ಪೂಜಾರಿ ಬಾಗಿಲು ಹಾಕಿಕೊಂಡು ಕಣ್ಮರೆಯಾದಾಗಲೆಲ್ಲ ಎಲ್ಲಿಂ ದಲೋ ಕೊಳಲು ಧನಿ ಕೇಳುವುದು. ಅದು ನಿಂತ ಕೂಡಲೆ ಗುಡಿಯೊಳ ಗಿಂದ ಕೊಳಲು ಊದಿದಶಬ್ದ. ಪೂಜಾರಿಯು ತನ್ನ ಜೀವದ ಉಸಿರನ್ನೇ ದೇವರ ವಿಗ್ರಹಕ್ಕೆ ಧಾರೆಯೆರೆದು ಅದನ್ನು ನುಡಿಸಿ, ನಡೆಸುತ್ತಾನೆಂದು ಜನರೆಲ್ಲ ತಿಳಿದುಕೊಂಡರು.

ಈ ವೈಭವದ ನಡುವೆ ಯಾತ್ರೆ ಬಂದವರ ಸಂಗಡ ಸುಶಿಕ್ಷಿತ ದಾದಿಯೂ ಬಂದಂತಾಯಿತು. ಗೋಪಾಲನ ಸಾನ್ನಿಧ್ಯದಲ್ಲಿ ಎಲ್ಲಿಂದಲೋ ಬಂದವಳಂತೆ ಕಂಡುಬಂದ ರೂಪಾದೇವಿಗೆ ಶಿಶುದರ್ಶನವೂ ಆಯಿತು.

ಸಮ್ಮಾರ್ಜನೆ, ಅರ್ಚನೆ, ಅಲಂಕಾರಾದಿಗಳೆಲ್ಲ ನಡೆದಾಗ, ಬಾಣಂತಿಗೆ ಔಷದೋಪಚಾರಗಳೂ ನಡೆದವು. ಸುತ್ತ ಹಳ್ಳಿಯವರಿಗೆಲ್ಲ ಗೋಪಾಲ ಕೂಟ ಊಟಗಳೂ ನಡೆದವು. ಎಲ್ಲಾ ಖರ್ಚಿಗೂ ಮಗುವಿನ ತಾಯಿಯೇ ಹಣ ಸುರಿದಂತೆ ಕಂಡುಬರುತ್ತಿತ್ತು.

ಆ ಮಗುವು ಬೆಳೆದು ಬಂತು. ಊರವರೆಲ್ಲರ ಆನಂದವೂ ಅದರ ಸಂಗಡ ಬೆಳೆಯುತ್ತಿತ್ತು. ಅದು ಹೆಣ್ಣು ಕೂಸಾಗಿದ್ದುದರಿಂದ ಸುರಗಿ ಯೆನ್ನಿಸಿಕೊಂಡು ದೊಡ್ಡದಾಯಿತು. ತೊಟ್ಟಿಲು ತೊರೆದು, ತೊದಲಾಡಿ, ತಾಯಿಯ ತೊಡೆ ಬಿಡುವವೇಳೆಗೆ, ಸುತ್ತೆಲ್ಲ ಹಳ್ಳಿಯವರ ಪ್ರೀತಿಯ ಪುತ್ಥಳಿ ಯಾಗಿ, ಸುರಗಿಯು, ತನ್ನ ನಗುವಿನಿಂದ ಗುಡಿಯನ್ನೆಲ್ಲ ತುಂಬಿಸಿ ಬಿಟ್ಟಳು. ಅವಳೇಕೆ ಅಲ್ಲಿದ್ದಳು. ಅವಳ ತಾಯಿಯೇಕೆ ಅಲ್ಲಿ ನೆಲಸಿದಳು ಮತ್ತು ಅವಳು ಅಲ್ಲಿ ಯಾರಿಗೆ ಏನಾಬೇಕು-ಎಂದು ಮುಂತಾಗಿ ಪ್ರಶ್ನೆಗಳು ಏಳ ಲಿಲ್ಲ. ಪೂಜಾರಿ ಚಿತ್ತು ಅವರಿಬ್ಬರ ಜೀವನದ ಭಾರವನ್ನು ಹೊತ್ತಿರುವ ನೆಂದು ಯಾರಿಗು ತಿಳಿಯಲೂ ಇಲ್ಲ.

೫

ಸುರುಗಿಯು ಪುಟ್ಟ ಹೆಜ್ಜೆ ಇಟ್ಟು ಓಡಾಡುವಂತಾದಳು. ರೂಪಾ ದೇವಿಗೆ ತನ್ನ ಬಾಲ್ಯದ ನೆನಪಾಯಿತು. ಇನ್ನು ಅದೇ ಗುಡಿಯ ಬಳಿ ನಿಲ್ಲುವುದು ಅವಶ್ಯಕವಿಲ್ಲವಾಯಿತು. ಆವೂರು ಈವೂರು ಅಲೆಯುವುದೂ ಅಸಾಧ್ಯವಾಯಿತು. ಎಲ್ಲಾದರೊಂದು ಕಡೆ ನಿಂತು ಸುರುಗಿಯ ವಿದ್ಯಾ ಭ್ಯಾಸಕ್ಕೆ ಏರ್ಪಾಡು ಮಾಡಬೇಕಾಯಿತು. ಹೊರಡುವ ನಿರ್ಧಾರಮಾಡಿದ ನಂತರ ಒಂದುದಿನ ಪೂಜಾರಿ ಚಿತ್ತು ಕರೆದು ಹೀಗೆಲ್ಲ ಹೇಳಿದಳು—“ಚಿತ್ತು ! ನೀನೀಗ ಗೋಸಾಯಿಯಾಗಿ ಬಿಟ್ಟದ್ದಿ, ನನ್ನ ಗೊಡವೆ ನಿನಗೇಕಿದ್ದೀತು. ನನ್ನ ಮತ್ತು ಸುರುಗಿಯನ್ನ ಮರತೇ ಬಿಟ್ಟೆಯೋ ಏನೋ. ಇಲ್ಲಿಯೇ ಹೀಗೆ ಈ ಗುಡಿಗೋಪಾಲನ ಕೂಸಾಗಿ ಸುರುಗಿಯೂ, ಅವಳ ತಾಯಾಗಿ ನಾನೂ ನಿಲ್ಲುವುದು ಸರಿಯಲ್ಲ. ಅವಳ ಜನ್ಮ ವಿಚಾರಕ್ಕೆ ಅವಳು ಹೇಯ ವಾಗಿ ಭಾವಿಸದಂತೆ, ನಾನವಳಿಗೆ ಉತ್ತಮ ವಿದ್ಯಾಭ್ಯಾಸವನ್ನೇ ಕೊಡಿಸ ಬೇಕಾಗಿದ್ದೀತು. ನನ್ನ ಜೀವನದ ಕುಡಿಯಾಗಿರುವ ಅವಳು ನನ್ನಂತೇ

ವಿಕಸಿಸಬಹುದು. ಆದರೆ ಅವಳು ನಾನು ಪಟ್ಟ ಕಷ್ಟಗಳನ್ನು ಅನುಭವಿಸ ಬಾರದು—ಅಥವ ಅನುಭವಿಸುವುದು ಅವಶ್ಯವಾದರೆ, ಸಮಾಜದಲ್ಲಿ ಹೊಸದೊಂದು ದಾರಿ ಹಿಡಿದು ಬದುಕಲಿ. ಆದುದರಿಂದ ನಾನೀಗ ಹೊರ ಡುವುದೇ ಸರಿ ಇದೋ ಈ ಜನ್ಮದಲ್ಲಿ ಕಡೆಯಸಾರಿ, ನೀನು ನನಗೆ ತೋರಿಸ ಬಹುದಾದ ಪ್ರೀತಿಯೆಲ್ಲ ತೋರಿಸಬಹುದು. ತಡೆಭಿಡೆಯೇನೂ ಬೇಡ. ಸುರಗಿಯನ್ನು ನೆರೆಯಾಳವಳೊಬ್ಬ ತಾಯಿ ಕರೆದೊಯ್ದಿದ್ದಾಳೆ. ಅವಳು ಹಿಂತಿರುಗುವುದಕ್ಕೆ ಇನ್ನೊಂದೇದಿನವಿದೆ ನಿನ್ನ ಗೋಸಾಯಿ ಕುಡತವನ್ನು ತೆಗೆದೆಸೆದು ಮೊದಲು ನನಗಾಗಿ ಉಡುತ್ತಿದ್ದ ವಸ್ತ್ರಧರಿಸಿ ಕೈಗೆ ಕೊಳಲು ತೆಗೆದುಕೊ. ಈ ಗಿರಿಯಿಳಿದು, ಆ ತೊರೆಯ ತಡಿಯಲ್ಲಿ ವಿಹಾರ ಮಾಡೋಣ. ಅಲ್ಲೊಂದು ಸುರಗಿಮರವಿದೆ. ಅದು ಈಗ ಹೂವು ಉದುರಿಸಿಕೊಂಡು ಕಾದಿದೆ. ಅಲ್ಲಿ ಒಂದುದಿನ, ಒಂದು ರಾತ್ರಿ ಸಂತೋಷ ದಿಂದ ತುಂಬಿಸಿ ಬಿಡೋಣ. ಈ ಸಂತೋಷ ಸಮಾರಂಭ ನನಗಲ್ಲ, ನಿನಗಾಗಿ, ನೀನು ನನಗೆ ಮಾಡಿದ ಜೀವದಾನಕ್ಕಾಗಿ, ಪುನರ್ಜನ್ಮ ದಾನ ಕ್ಕಾಗಿ, ಆ ಸುರುಗಿಗಾಗಿ, ಅವಳನ್ನೂ ನನ್ನನ್ನೂ ಇಷ್ಟು ದಿನವೂ ಸಾಕಿ ಸಲಹಿದ್ದಕ್ಕಾಗಿ, ಇದೇ ಕಡೆಯ ಕಾಣಿಕೆ. ಇಂದು ಹಗಲು ರಾತ್ರಿ ಪೂರ್ತ ಈ ನನ್ನ ದೇಹವು ನಿನಗೆ, ನಿನ್ನ ಅಗಾಧ ಪ್ರೇಮಕ್ಕೆ ಸಂಪೂರ್ಣಾ ರ್ಪಣ. ಮೊದಲಿನ ತಾರುಣ್ಯವಿಲ್ಲ ನನ್ನಲ್ಲಿ. ಆದರೂ ನಾನೊಂದು ಹೊಸ ಹಸುರು ರಸ ಪ್ರಯೋಗದಿಂದ ಈ ಜಾಜ್ವಲ್ಯತಾರುಣ್ಯವನ್ನು ಪಡೆದಿ ದ್ದೇನೆ. ಇದರ ಪರಿಣಾಮವೇನೋ ನಾನರಿಯೆ. ಒಂದಂತೂ ನಿಶ್ಚಯ. ಅದು ನಿನಗೆ ಸೌಖ್ಯ ಸಮಾರಂಭ, ಇನ್ನೊಂದರ ವಿಚಾರವಾಗಿ ನಾನೀಗ ಏನೇನೋ ಹೇಳುವಂತಿಲ್ಲ. ನೀನೀಗ ನನ್ನ ಕಡೆನೋಡಿದರೆ ಏನೇನೊ ತಿಳಿಯುವುದಿಲ್ಲ. ನನ್ನ ರೂಪರಾಗಾದಿಗಳು ಆ ಮರದ ಬುಡದಲ್ಲಿ ಹೊರ ಹೊಮ್ಮುತ್ತವೆ, ನಾಳೆಯ ಸೂರ್ಯೋದಯದ ವೇಳೆಗೆ.

ಹೀಗೆ ಹೇಳಿ ರೊಪಾದೇವಿ ಎಲ್ಲಿಯೋ ಮಾಯವಾದಳು. ಆಗ ಬೆಳಗಿನ ಜಾವ, ಚಂದ್ರನ ಬೆಳಕು ಎಲ್ಲಿಷ್ಟೆ ಎಂದರೆ ಅಲ್ಲೆಲ್ಲಾ ಚೆಲ್ಲಾಡು ತ್ತಿತ್ತು. ಭೂದೇವಿ ಬೆಳದಿಂಗಳುಟ್ಟು ಪ್ರೇಮ ಪೂಜಾರಿಗಾಗಿ ಕಾದಂತೆ ಕಂಡಿತು. ಪಾರಿಜಾತದ ಕಂಪು, ಅಶೋಕದ ಪರಿಮಳ, ಹರಿಯುವ

ನೀರಿನ ಮಂಜುಳ ನಿನದ, ಗಿರಿಯಾಚೆ ಇಳಿಜಾರು ಹಂಕಲೆಲ್ಲ ಕೂಗಿ ಕರೆವಂತಿತ್ತು. ಚಿತ್ತು ಎದ್ದು ಹೊರಟ. ಸ್ನಾನಾದಿಗಳನ್ನು ಮಾಡಿದ. ಈ ಹೆಣ್ಣು ಹೃದಯದ ಅರಿವಾಗಲಿಲ್ಲ ಅವನಿಗೆ. ಸಂಸಾರ ಬಂಧನ ತಪ್ಪಿದ ಹೆಣ್ಣು ಏನೇನು ಮಾಡಬಹುದು ಏನೇನು ಮಾಡಬಾರದು, ಎಂದು ಹಿಂಜಿಸಿ ಹೇಳುವವರಾರು, ರೂಪಾ ಈಗ ಹರಿವ ನೀರಾಗಿದ್ದಾಳೆ. ಇಷ್ಟುದಿನ ಆ ಮಗುವನ್ನು ಪಡೆದು, ಬೆಳೆಸಿಕೊಳ್ಳುವ ನೆವದಿಂದ ಒಂದು ಮಡುವಿನ ಬಂಧನದಲ್ಲಿ ನಿಂತಿದ್ದಳು. ಈಗ ಪುನಹಾ ಹರಿದುಹೋಗುವ ಆಸೆ. ಎಲ್ಲಿ ಇಳಿಜಾರೋ, ಎಲ್ಲಿ ನೀರ್‌ಬೀಳೋ ಬಲ್ಲವರಾರು? ಆಗಲಿ ಇದೊಂದು ದಿನ ರೂಪಾ ಸಂಗಡ ನಾಕ ನಿಲಯದಲ್ಲಿ ಇದ್ದುಬಿಡೋಣ-ಎಂದೆಲ್ಲ ಯೋಚಿಸಿ, ಆದಿನ ಪೂಜೆಯನ್ನು ಸಾಂಗಗೊಳಿಸಿದನು. ಗಂಟೆಗಳ ಶಬ್ದವು ಸುತ್ತ ಹಳ್ಳಿಗಳಿಗೆಲ್ಲ ಕೇಳಿಸಿತು. "ಪೂಜಾರಯ್ಯ, ಇದ್ಯಾಕಾ ಈಜಿನ, ಮಾಗಿ ಪೂಜೆ ಮಾಡ್ಯಾನು? ಯಾರೋ ಬಕ್ತರು ಬಂದಿದ್ದಾರು ಬುಡು!"—ಎಂದುಕೊಂಡರು ಹಳ್ಳಿಯ ಜನ-ಹೊಸ ಗಂಟೆಗಳ ಢಣಾರ್, ಢಣಾರ್, ಶಬ್ದವು ರೂಪಾದೇವಿಗೆ ಕೇಳಿಸಿತು. ಅವಳತ್ತ ಸುರಗಿಯ ಬುಡದಲ್ಲಿ ತನ್ನ ಪ್ರೇಮ ಭಂಡಾರವೆಲ್ಲ ಹರಡಿಟ್ಟುಕೊಂಡು ಕಾದಲ ಪೂಜೆಗಾಗಿ ಕಾದಿದ್ದಳು. ಪಾದಳ್ಳಿಯಲ್ಲಿ ಸುರುಗಿ ಎಚ್ಚೆತ್ತಳು.

"ಬೆಟ್ಟದಲ್ಲಿ ಭಾರಿಗಂಟೆ

ಬಾರಿಸುತ್ತೆ ಕೇಳೀ—

ಡಡಢಂ ಡುಡುಢುಂ, ಡುಂಡಾಂಢೀಮ್"—ಎಂದು ತೊದಲು ನುಡಿಯಲ್ಲಿ ಹೇಳುತ್ತ ಸ್ವಲ್ಪ ಹೊತ್ತು ಕುಣಿದಳು. ಮುಂಚಿತವಾಗಿ ಎದ್ದು ಅಭ್ಯಾಸವಾಗಿದ್ದುದರಿಂದ, ಎದ್ದು ಬಿಟ್ಟಿದ್ದಳು. ನಿತ್ಯ ದೇವರೆದುರು ಹಾಡು ಹೇಳಿ ಕುಣಿದು ಅಭ್ಯಾಸವಾಗಿದ್ದುದರಿಂದ, ಯಾರ ಮನೆಯಲ್ಲಿದ್ದಾಳೋ ಅಲ್ಲಿಯ ದೇವರ ಪಠದ ಮುಂದೆ ಕುಣಿದು ಕುಪ್ಪಳಿಸಿದಳು. ಗುಡಿ ಗೋಪಾಲನಲ್ಲಿಗೆ ಹೋಗಬೇಕೆಂದು ಹಟ ಹಿಡಿದಳು. ಆ ಮನೆಯವರಿಗೆ ಸುರುಗಿಯನ್ನು ಹಿಡಿದು ನಿಲ್ಲಿಸುವುದು ಕಷ್ಟವಾಗಿತ್ತು.

೬

ಒಂದು ಹಗಲು ಒಂದು ರಾತ್ರಿ ಕಳೆದಾಯಿತು. ರೂಪಾದೇವಿಯನ್ನು ಸಾಗಕಳಿಸುವ ದಿನ ಬಂತು. ಊರವರೆಲ್ಲ ಕಣ್ಣೀರಿಟ್ಟರು. ಸುರುಗಿಯು ಗೋಪಾಲನ ಮೋಹಿನಿ ಅವತಾರವೆಂದು ಅವರೆಲ್ಲ ತಿಳಿದಿದ್ದರು. ಆ ಮೋಹಿನಿಯನ್ನು ಬಿಡಲಾರದೆ ಎಲ್ಲರೂ ಎತ್ತಿ ಎತ್ತಿ ಮುದ್ದಾಡಿಬಿಟ್ಟರು. ಆ ಮಹಾತಾಯಿ ರೂಪಾದೇವಿಯ ಸಂಗಡ ನಾಲ್ಕು ಗಾಡಿಯ ತುಂಬ ಸಾಮಾನು ಸರಂಜಾಮು ಹೊರಟಿತು. ಒಂದು ದಿನವೆಲ್ಲ ಗಾಡಿ ಪ್ರಯಾಣವಾಯಿತು, ಒಂದು ರಾತ್ರಿ ರೈಲು ಪ್ರಯಾಣವಾಯಿತು. ನಡುವೆ ಒಂದು ಊರಲ್ಲಿಳಿದು ಚತ್ರದಲ್ಲಿದ್ದು ತಾವು ತಂದ ಸಾಮಾನೆಲ್ಲ ಮಾರಿದರು. ಸಾಕಾದಷ್ಟು ಹಣ ದೊರಕಿತು. ಬೆಂಗಳೂರಲ್ಲಿ ನಿಂತರೆ, ಸುರುಗಿಯ ಶಿಕ್ಷಣ ಸರಿಯಾಗಿ ನಡೆದೀತೆಂದು ನೆನಸಿದರು. ಮಲ್ಲೇಶ್ವರದ ಅಂಚಿನಲ್ಲಿ ಒಂದು ಮನೆಯಲ್ಲಿ ವಾಸವಾಗಿದ್ದರು. ಹತ್ತಿರದಲ್ಲಿದ್ದ ಶಿಶು ವಿಹಾರದಲ್ಲಿ ಕೆಲವು ತಿಂಗಳು, ನರ್ತನಾಲಯದಲ್ಲಿ ಕೆಲವು ತಿಂಗಳು ಸುರುಗಿಯ ಶಿಕ್ಷಣವು ಸಾಂಗವಾಗಿ ಜರುಗುವಂತಿತ್ತು.

ಈ ವೇಳೆಗೆ ರೂಪಾ ತನ್ನನ್ನು ತಾನೇ ಮರೆತಳು. ಚಿತ್ತು ಪೂಜಾರಿಯನ್ನು ಗೋಪಾಲಸನ್ನಿಧಿಗೆ ಹೋಗಬಿಡಲೊಲ್ಲದೆ ತನ್ನ ಬಳಿಯೇ ನಿಲ್ಲಿಸಿಕೊಂಡಳು. ಗೋಸಾಯಿ ಬಟ್ಟೆಯನ್ನು ಆತ ಧರಿಸುವುದಕ್ಕೆ ಬಿಡಲಿಲ್ಲ. ಹಿಂದಿನ ವ್ಯಾಮೋಹವು ಚಿತ್ತುವನ್ನು ಬಿಟ್ಟರೂ ಇವಳನ್ನು ಬಿಡಲಿಲ್ಲ.

ನಿರ್ವಾಹವಿಲ್ಲದೆ ಚಿತ್ತು ಪೂಜಾರಿಯು, ಅಚ್ಯುತರಾವ್ ಪೂಜಾರ ಎಂದು ಹೆಸರಾಂತ ಅಂಗಡಿಕಾರನಾದನು. ಅವನ ಅಂಗಡಿಗೆ ಸುಮಂಗಲಿ ಭಂಡಾರವೆಂದು ನಾಮಕರಣವಾಯಿತು. ಸುಮಂಗಲಿ ಭಂಡಾರದಲ್ಲಿ ಹೆಂಗಸರ ಮನ ಸೆಳೆಯುವ ಬಳೆ, ಬಂಗಾರ, ಬಣ್ಣ, ಬಟ್ಟೆಗಳೆಲ್ಲ ದೊರಕುತ್ತಿದ್ದವು. ಸುರುಗಿಯೇ ಅಂಗಡಿಯಲ್ಲಿದ್ದು ಬಂದವರಿಗೆಲ್ಲ ಸರಬರಾಜು ಮಾಡುವಂಥಾ ಪೋರಿಯಾದಳು. ರೂಪಾ ಅಂಗಡಿಯ ಬಳಿ ಸುಳಿಯಲಿಲ್ಲ. ಅವಳಿಗೆ ಈಗ ಪ್ರಪಂಚವೇ ಬೇಕಿಲ್ಲ. ಒಂದು ತೊಡಕಿನಿಂದ ತಪ್ಪಿಸಿಕೊಂಡಿದ್ದಳು. ಇನ್ನೊಂದು ತೊಡಕಿನಲ್ಲಿ ಸಿಕ್ಕಿಬಿದ್ದಳು ಈಗ

ಅತ್ಯುತರಾಯನ ಧರ್ಮಪತ್ನಿಯಾಗಿರುವಳೆಂದು ಸುತ್ತಣವರೆಲ್ಲ ಅರಿತಿದ್ದರೂ-ತಾನು ಯಾರ ಧರ್ಮಪತ್ನಿಯೂ ಅಲ್ಲವೆಂದು, ಆಕೆ ಅರಿತಿದ್ದಳು. ಹಿಂದೊಮ್ಮೆ ಮಾಡಿದ ಪ್ರತಿಜ್ಞೆಯು ಸಾಧನೆಯೂ ಆಗಲಿಲ್ಲ, ಆಗುವಂತೆಯೂ ಇರಲಿಲ್ಲ. ಪುನಹಾ ಶಿಶುಪೋಷಣೆಯು ಅವಳಿಂದ ಸಾಧ್ಯವಾಗುವಂತಿರಲಿಲ್ಲ. ತನ್ನನ್ನು ಕಷ್ಟಕಾಲದಲ್ಲಿ ಕಾಪಾಡಿಕೊಂಡು ಬಂದಿದ್ದ ಚಿತ್ತೂ ಪೂಜಾರಿಗೆ ಇನ್ನೂ ಹೆಚ್ಚಿನ ತೊಂದರೆ ಕೊಡಲು ಸಿದ್ಧಳಾಗಿರಲಿಲ್ಲ. ಮುಂದಿನ ಏರ್ಪಾಡು ಮಾಡುವುದಕ್ಕಾಗಿ, ದೇವರೂ ಒಪ್ಪಿ ಹಿಂದಿನ ಹಠ ಸಾಧನೆ ಸಾಗಿಸುವುದಕ್ಕಾಗಿ ಒಮ್ಮೆ ಬೊಂಬಾಯಿಗೆ ಹೋಗಿ ಬಂದಳು. ಮದುವೆಯಾದ ಗಂಡನ ವ್ಯವಹಾರ ರೀತಿಯೆಲ್ಲ ಅರಿತಳು. ಆತನಿಗೆ ಅರಿವಾಗದಂತೆ, ಆತನ ಮನಸಿನ ರೀತಿಯೆಲ್ಲ ನೋಡಿಕೊಂಡಳು. ಆತನು ಹಿಂದಿನ ಆನಂದಾವಧಾನಿಯಲ್ಲ, ಪಾದಳ್ಳಿಯ ಗುಂಡಾವಧಾನಿಯ ಮಗನೂ ಅಲ್ಲ, ಗಾಜಿನ ಕಾರ್ಖಾನೆಯ ಜಿ. ಎ. ದಾನ್ನಿಯಾಗಿದ್ದಾನೆ. ಆತನ ಎರಡನೆ ಹೆಂಡತಿಗೆ ಕ್ಷಯರೋಗ. ಮನೆಯನ್ನೆಲ್ಲ ತನ್ನ ನಗುವಿನ ದನಿಯಿಂದ ತುಂಬಿಸುತ್ತಿದ್ದ ಗಂಡು ಮಗುವೊಂದು ಅಂದೇ ತೀರಿಕೊಂಡಿತ್ತು.

ಆದಿನ ರೂಪಾದೇವಿ ಜಿ. ಯೆ. ದಾನಿಯ ಬಳಿಗೆ ಹೋದಳು. ಹೆಂಗುಸಲ್ಲದೆ ಇನ್ನಾರು ಬಂದಿದ್ದರೂ ಅಂದು ಮನೆ ಯಜಮಾನನನ್ನು ನೋಡುವುದು ಸಾಧ್ಯವಿರಲಿಲ್ಲ. ಗಾಜು ಅಂಗಡಿಯೊಂದರ ವ್ಯವಹಾರಿಣಿಯಂತೆ ಬೆಂಗಳೂರು ದಂಡಿನ ಅಂಗಡಿಯೊಂದರ ಪರವಾಗಿ, ಬಹಳ ಲಾಭದಾಯಕ ರೀತಿಯಲ್ಲಿ ಮಾತಾಡಿದಳು. ಮಾರನೆಯ ದಿನ ಮತ್ತೆ ಹೋದಳು. ಜಿ. ಎ. ದಾನಿಯ ಹಿಂದಿನ ಹೆಂಡತಿಯಾದ—ಪಾರ್ವತಿದೇವಿಯ ವಿವರವೆಲ್ಲ ಹೇಳಿದಳು. ಅವಳು ಬೆಂಗಳೂರು ದಂಡಿನಲ್ಲಿ ಬಹು ಕಾರ್ಪಣ್ಯದಲ್ಲಿ ಜೀವಿಸುತ್ತಿರುವಳೆಂದೂ, ಕೂಲಿನಾಲಿಯಲ್ಲಿ ಜೀವಿಸಿದರೂ ತನ್ನ ಒಬ್ಬಳೇ ಮಗಳಾದ ಸುರುಗಿ ಎಂಬುವಳಿಗೆ ಸರಿಯಾದ ವಿದ್ಯಾಭ್ಯಾಸ ಮಾಡಿಸುತ್ತಿರುವುದಾಗಿಯೂ ತಿಳಿಸಿದಳು.

ಆನಂದಾವಧಾನಿಗೆ ನೆನಪು ಬಂತು. ತಂದೆಯ ಸಂಗಡ ಕಾದಾಡಿಕೊಂಡು ಬೊಂಬಾಯಿಗೆ ಬಂದು ಬಿಟ್ಟಿದ್ದ ಇತ್ತ ತಂದೆ ತೀರಿಕೊಂಡ ಮೇಲೆ ಮನೆಯ ಹಂಬಲೆಲ್ಲ ತಪ್ಪಿತು. ಬೊಂಬಾಯಲ್ಲಿ ದೂರದ ನೆಂಟರೊಬ್ಬರ

ಮನೆಯಲ್ಲಿ ನಿಂತು ವ್ಯಾಪಾರದ ಕಾಲೇಜಿನಲ್ಲಿ ಓದಿ ಪ್ರಶಸ್ತಿ ಪಡೆದನು. ತನ್ನ ಬುದ್ಧಿಗೆ ಅರಿವಾಗುವ ಮುಂಚೆ ಆ ಮನೆಯ ಹೆಣ್ಣು ಮಗಳ ಸಂಗಡ ನಡೆನುಡಿಯಲ್ಲಿ ಅನುರಕ್ತನಾಗಿಬಿಟ್ಟಿದ್ದನು. ಮನೆ ಯಜಮಾನನು ಹಟಹಿಡಿದು ಮದಿವೆಮಾಡಿಸಿದನು. ಅದು ಎರಡನೆ ಮದಿವೆಯೆಂದು ಅವರಿಗಾರಿಗೂ ತಿಳಿಯಲಿಲ್ಲ. ಅವಧಾನಿಯಾದರೂ ಹೇಳಕೊಂಡಿದ್ದರೆ ಅನುಕೂಲಪಕ್ಷವಾಗುತ್ತಿತ್ತೊ, ಏನೋ!

ಅನಂತರ ಆನಂದಾವಧಾನಿಯು ವ್ಯಾಪಾರಕ್ಕೆ ಆರಂಭಿಸುವ ಸಮಯಕ್ಕೆ ಸರಿಯಾಗಿ ಆತನ ಮೊದಲಿನ ಪತ್ನಿ ಪಾರ್ವತಿ ಅಥವ ಪಾರೂದೇವಿ ಬಂದಳು. ಕಾಡಿದಳು, ಬೇಡಿದಳು, ಏನಾದರೂ ಅವಧಾನಿ ಜಗ್ಗಿದರೂ ಅವನ ಎರಡನೆಯಾಕೆಯ ಕಡೆಯವರು ಎಡೆಕೊಡಲಿಲ್ಲ. ಪಾರೂ ದೇವಿಯು ಪಣತೊಟ್ಟು ಹೊರಟಳು. ಗಂಡು ಮಗುವನ್ನು ಹೆತ್ತು ತಂದು ಅವನೆದರು ನಿಂದು ಕಾದಾಡಿ ಅವನ ಕೀರ್ತಿ ಮತ್ತು ಕಾಂಚನವನ್ನೂ ಅಪಹರಿಸುವುದಾಗಿ ಹೇಳಿ ಹೊರಟು ಹೋದಳು. ಮುಂದೆ ಏನಾದಳೋ ಅವನಿಗಂತು ಅರಿವಾಗಲಿಲ್ಲ. ಕೆಲವು ವರ್ಷಗಳ ನಂತರ ದ್ರವ್ಯದ ಜತೆಗಿದ್ದ ಆರೋಗ್ಯವು ದಾರಿತಪ್ಪಿ ಹೊರಟು ಹೋಯಿತು. ಹೆಂಡತಿಯು ಕ್ಷಯರೋಗ ಪೀಡಿತಳಾದಳು, ಹುಟ್ಟಿದ ಒಂದೇ ಒಂದು ಮಗುವು ಉದರ ರೋಗದಿಂದ ನರಳ ತೊಡಗಿತು. ಆಗ ಅವಧಾನಿಗೆ ಹಳೆಯ ನೆನಪು ಬಂತು. ಪಾರ್ವತಿ ದೇವಿಯನ್ನು ಹುಡುಕಿಕೊಂಡು ಹೋಗುವ ಯೋಚನೆಮಾಡಿದ್ದನು. ಈದಿನ ಅರಿವಾಯಿತು ಪಾರೂದೇವಿ ಎಲ್ಲಿದ್ದಳೆಂದು. ಆಕೆಯನ್ನು ಕರೆಸಬಹುದೇ; ಆಕೆ ಬರುವಳೆ; ಆಕೆಯು ಹಟಸಾಧನೆಗಾಗಿ ಏನು ಮಾಡಿದ್ದಾಳೋ. ಇಷ್ಟೆಲ್ಲ ಆಗಿ, ಇಷ್ಟುದಿನ ಕಳೆದ ಮೇಲೆ ಅವನಿಗೂ ಅವಳಿಗೂ ಮನಸ್ಸು ಕೂಡಿ ಬಂದೀತೇ ?—ಹೀಗೆಲ್ಲ ಯೋಚಿಸುತ್ತ ಕುಳಿತನು.

ರೂಪಾದೇವಿಗೆ ಅವಧಾನಿಯ ಮನಸಿನಲ್ಲಿ ನಡೆವುದೆಲ್ಲ ಅರ್ಥವಾಯಿತು. ಆಗ ತನ್ನ ಮುಂದಿನ ವಿವರಗಳನ್ನು ಎಷ್ಟಾಗಿ ಹೇಳಬಹುದೋ ಅಷ್ಟುಮಾತ್ರ. ಹೇಳಿದಳು. ಅವಳು ಹೇಳಿದಷ್ಟು ಕೇಳಿ ಅವಧಾನಿಗೆ ಆವಳ ಮೇಲೆ ಮಮತೆ ಬಂತು. ತಾನು ಒಂದು ದಿನ ಮಾತ್ರ ಅವಳ ಸಂಗಡ ಇದ್ದ ನೆನಪು ಬಂತು. ಆ ನೆನಪೇ ಅಮೃತಮಯವಾಗಿತ್ತು.

ಆಕೆಯ ಸಂಗಡ ಒಂದು ಮಗುವೂ ಬಂದರೆ ಅದೂ ಆನಂದವೇ. ಆರೋಗ್ಯ ದಿಂದ, ಆನಂದದಿಂದ, ತುಂಬಿ ತುಳುಕಾಡುವ ಒಂದು ಮಗುವಿದ್ದರೆ ಅದು ಪಾರ್ವತಿಗೂ ತನಗೂ ನಡುವಿನ ಬಂಗಾರದ ಕೊಂಡಿಯಾಗಿರುತ್ತದೆ. ಇರ ಬಾರದೆ ಹಾಗೆ, ಇರಲಾರದೆ ಹಾಗೆ, ವಿಧಿ ಬರೆಯಬಾರದೆ ಹಾಗೆ-ಎಂದೆಲ್ಲ ತೆರನಾಗಿ ಚಿಂತಿಸುತ್ತಿದ್ದನು.

ಆನಂದಾವಧಾನಿಯು ಸುಮಂಗಲಿ ಭಂಡಾರದ ಮಾಲೀಕರ ಸಂಗಡ ಪಾರೂದೇವಿಗೊಂದು ಕಾಗದವನ್ನೂ ಮತ್ತೊಂದು ಚಕ್ಕು ಬುಕ್ಕನ್ನೂ ಕೊಟ್ಟನು. ಆ ಚಕ್ಕು ಬುಕ್ಕಿನ ಹಾಳೆಗಳಿಗೆಲ್ಲ ಸಹಿಮಾಡಿದ್ದನು. ತಿಂಗಳಿ ಗೊಮ್ಮೆ ಮುನ್ನೂರಕ್ಕೆ ಮೀರದೆ ಎಷ್ಟಾದರೂ ಹಣವನ್ನು ಆ ಬ್ಯಾಂಕಿ ನಿಂದ ಪಡೆಯಬಹುದಾಗಿತ್ತು.

ರೂಪಾದೇವಿ ಹಿಂತಿರುಗಿ ಬಂದಳು.

೭

—"ನೀನು ಅಷ್ಟುಸಲ ಹೋಗಿನಿಂತು ಮಾತಾಡಿದರೂ ಆತ ನಿನ್ನ ಗುರುತುಹಿಡಿಯಲಿಲ್ಲವೆ?"

—"ಗುರುತು ಎನ್ನುವುದು ಕಾಡುಹಕ್ಕಿ. ಅದಕ್ಕೆ ಕುಳಿತರೆ ಒಂದು ಬಣ್ಣ ನಿಂತರೆ ಒಂದು ಬಣ್ಣ, ಮತ್ತೆ ಹಾರಾಡಿದರೆ ನಾನಾ ಬಣ್ಣ. ಎಲ್ಲರ ಕಣ್ಣಿನ ಸೆಳೆವಿಗೂ ಸಿಗುವುದಿಲ್ಲ."

—"ಹಾಗಾದರೆ ನೀನು ಅಷ್ಟು ಸಾರಿ ಪಾರೂದೇವಿಯನ್ನು ರೂಪಾ ದೇವಿಯಾಗಿ ಮಾಡಿದ್ದೆಯಲ್ಲ. ಆಗಲೂ ಹೆಸರಿನ ಅದಲು ಬದಲು ಆತನಿಗೆ ತಿಳಿಯಲಿಲ್ಲವೆ?"

—"ಆತನ ಸಂಕಟ ಬಹಳವಾಗಿತ್ತು. ಆತನಿಗೆ ಇಂದ್ರಿಯ ಪಾಟವೇ ಕಡಿಮೆಯಾಗಿತ್ತು. ನಾನು ಹೋದಾಗಲೆಲ್ಲ ಆತನ ಹೃಯದಿಂದ ಹಳೆಯನೆನಪೆಲ್ಲ ಪಶ್ಚಾತ್ತಾಪದ ಬುಗ್ಗೆ ಬುಗ್ಗೆಯಾಗಿ ಉಕ್ಕಿ ಉಕ್ಕಿ ಬರು ತ್ತಿತ್ತು. ನಾನೇ ಹಲವುಬಾರಿ ಯೋಚಿಸಿ ಎದ್ದು ಆತನೆಡೆಗೆ ಹೊರಟಿದ್ದೆ. ಹೇಳಿಬಿಡುವುದರಲ್ಲಿದ್ದೆ—ಇದೋ ಬಂದಿದ್ದೇನೆ ನಾನೇ ನಿನ್ನ ಪಾರ್ವತಿ

ಎಂದುಬಿಡುವುದರಲ್ಲಿದ್ದೆ !—ಆದರೆ ಸಧ್ಯ ನನ್ನನ್ನು ನಾನೇ ತಡೆದುಕೊಂಡೆ. ಆತನನ್ನು ಕರೀ ಕಗ್ಗತ್ತಲೆಯ ಕುರುಡು ಸುರಂಗದಲ್ಲಿ ಬಿಟ್ಟುಬಂದೆ."

—"ಹೌದಲ್ಲ! ಅದಕ್ಕೆ ಕಾರಣ?"

—"ಕಾರಣ ........ ಇದೆಯಲ್ಲ. ನಾನು ಚಿತ್ತೂಪೂಜಾರಿಯನ್ನು ಗಾಂದರ್ವರೀತಿಯಲ್ಲಿ ಜಾನಕಿರಾಮರ ಸಮುಕ್ಷಮದಲ್ಲಿ ಮದಿವೆಯಾದೆ, ಬುದ್ಧಿಬಂದಮೇಲೆ. ಆನಂದಾವಧಾನಿಯನ್ನು ಕಂಕಣಬಂಧನ ರೀತಿಯಲ್ಲಿ ಬಲವಂತಕ್ಕೆ, ಬುದ್ಧಿಬರುವಮುನ್ನ ಮದಿವೆಯಾಗಿದ್ದೆ. ಅಲ್ಲದೆ ಆತನಿಗೆ ಒಬ್ಬಳಿದ್ದಳು ಪತ್ನಿ! ನನಗಾಗಿ ನನ್ನ ಗಂಧರ್ವ ಇಲ್ಲಿ ಕಾದಿದ್ದನಲ್ಲವೆ? ಈ ಸುಮಂಗಲೀ ಭಂಡಾರದಲ್ಲಿ........ಅಲ್ಲವೇ........!"

ಹೀಗೆಂದು ಆತನಕಡೆ ಸಳೆನೋಟಬೀರಿದಳು. ಅಚ್ಯುತನಾದ ಚಿತ್ತೂ ಪೂಜಾರಿಯು ಸರ್‍ರನೆಬಂದು ಅವಳನ್ನು ಬರಸೆಳೆದು ತಬ್ಬಿಕೊಳ್ಳುವುದರಲ್ಲಿ ದ್ದನು. ಆದರೆ ಅದೇ ಅಮೃತಗಳಿಗೆಯಲ್ಲಿ ಅಲ್ಲಿಗೆ ಯಾವುದೋ ಆಟದ ನೆವದಿಂವ ಕೂಗಿಕೊಂಡು ಸುರಗಿ ಓಡಿಬಂದಳು. ಅಚ್ಯುತರಾಯನು ತನ್ನ ಮೋಹವನ್ನೆಲ್ಲ ರೂಪಾಂತರಮಾಡಿ ಸುರುಗಿಗೆ ಅರ್ಪಿಸಬೇಕಾಯಿತು. ಮೋಹನ ತರಂಗಿಣಿಯಾದ ಅವಳು "ಬಿಡು ಚಿತ್ತಪ್ಪ ಇದೇನು ಹೀಗೆ ಮಾಡುತೀ........"—ಎಂದು ಓಡಿಬಿಟ್ಟಳು.

೮

ಕೊಳಲುಗೋಪಾಲನ ಗುಡಿಯಲ್ಲಿ ಭಕ್ತರೆಲ್ಲ ಸೇರಿ ಚಿತ್ತುಪೂಜಾರಿಗೆ ಕಾಗದ ಬರೆಸಿದರು. ಅಷ್ಟೊಂದು ಅಧ್ವರಿಯಿಂದ ಪೂಜೆನಡಿಸಿ ಪುರಸ್ಕಾರ ಪಡೆದು ಈಗ ಹೀಗೆ ಗಿರಿಗೋಪಾಲನನ್ನು ಬಿಟ್ಟು ಹೋಗಬಹುದೇ? ಸುತ್ತ ಹಳ್ಳಿಯವರೆಲ್ಲ ಕಾಣಿಕೆ ತೆತ್ತು ಗುಡಿಯ ಜೀರ್ಣೋದ್ಧಾರವನ್ನು ಮಾಡಿದುದು ಏತಕ್ಕೆ? ಈಚೆಗೆ ನಿತ್ಯವಿಧಿಗಳಲ್ಲದೆ ಮಾಸಪೂಜೆಗಳು ಸಹ ನಿಂತುಹೋಗಿವೆ. ದೇವರವಿಚಾರದಲ್ಲಿ ಈ ರೀತಿ ಅಸಡ್ಡೆ ಸಲ್ಲದು. ಗೋಸಾಯಿಯಾದವರು ಹೀಗೆ ಕೊಳಲು ಕೃಷ್ಣನ ಸೇವಯನ್ನು ಬಿಡಬಾರದು. ತಕ್ಷಣವೇ ಹೊರಟು ಬರಬೇಕು,—ಈಪರಿಯಾಗಿ ಹಲವುಬಾರಿ ಕಾಗದಗಳು ಪದೇ ಪದೇ ಹಾರಾ

ಡಿದಮೇಲೆ ಗೋಸಾಯಿ ಚಿತ್ತೂಪೂಜಾರಿಯು ತನ್ನ ಮೊದಲಿನ ದೇವ ಸ್ಥಾನಕ್ಕೆ ಹಿಂತಿರುಗಬೇಕಾಯಿತು. ಅಷ್ಟೂ ಅಲ್ಲದೆ ಹಳ್ಳಿಯ ತುಪ್ಪವಿಲ್ಲದೆ ದಿಲ್ಲಿಯ ದೀಪ ಉರಿಯುವಂತಿರಲಿಲ್ಲ. ಏನಾದರೂ ರೀತಿಯಲ್ಲಿ ಈ ಬೆಂಗ ಳೂರು ಸಂಸಾರಕ್ಕೆ ಆ ಹಳ್ಳಿಯ ಸಂಬಂಧವು ಅವಶ್ಯಕವೆಂದಾಗಿ ತೋರಿ ಬಂತು. ಅಚ್ಯುತರಾಯನು ಅಂಗಡಿ ಕೆಲಸವನ್ನು ರೂಪಾದೇವಿಯ ವಿಚಾರ ಣೆಗೆ ಬಿಟ್ಟುಕೊಟ್ಟು ಹೊರಟುಹೋದನು.

ಯಾವುದೋ ಒಂದು ಆಸೆಯಿಂದ ಚಿತ್ತೂಪೂಜಾರಿಯ ಸ್ನೇಹ ಸಂಕೋಲೆಗೆ ಸಿಕ್ಕಿದವಳು, ಯಾವಾಗಲೆಂದರೆ ಆಗ ಬಿಡಿಸಿಕೊಳ್ಳುವ ರೀತಿ ಯಲ್ಲಿ ಇದ್ದವಳು, ರೂಪಾ ಈಗ ಸ್ವಾತಂತ್ರ್ಯವನ್ನು ಬಯಸದವಳಾದಳು. ಪಂಜರದ ಬಾಗಿಲುತೆರೆದಿದ್ದರೂ ಹಕ್ಕಿ ಹಾರದು. ಬಂಧನವೇ ಅದಕ್ಕೆ ಸಹಜವೆನ್ನಿಸಿತು. ಕಾರಣಾಂತರದಿಂದ ಸಮನಿಸಿದ ಈ ಸಂಬಂಧವು ಶಾಶ್ವತ ವಾಯಿತು. ಮೊಟ್ಟಮೊದಲಿನ ಹಟದ ಕಾವು ಈಗ ಆರುತ್ತ ಬಂತು. ಚಿತ್ತೂಪೂಜಾರಿಯ ಪುರಸ್ಕಾರಗಳಿಗಾಗಿ ರೂಪಳ ಹೃದಯವು ಕಾತರಿಸಿತು. ಧರ್ಮಪತಿಯು ಕೈಬಿಟ್ಟು, ಈ ಬಡಪೂಜಾರಿಯ ಪ್ರೇಮಕಾಣಿಕೆಗಳಿಗಾಗಿ ಕಾದಿರುವುದು ಅನ್ಯಾಯವಾಗಿ ಕಂಡರೂ, ಬೇರೆ ಮಾರ್ಗವನ್ನೇ ಅರಿಯ ದಾದಳು. ಹಳ್ಳಿಗೆ ಹಿಂದಿರುಗಿದ ಚಿತ್ತೂಪೂಜಾರಿ ಹಿಂದಿರುಗಿಬರುವ ಸಂಭವವೇ ಇಲ್ಲವಾಯಿತು. ರೂಪಾದೇವಿಯು ಪುನಹಾ ಅದೇ ಹಳ್ಳಿಗೆ ಹಿಂದಿನ ಕೆಳತನದಲ್ಲಿ ಹೋಗುವುದು ಸಾಧ್ಯವೆನಿಸಲಿಲ್ಲ. ಹೋದರೂ ಸೇವಾರ್ಥವಾಗಿ ಎರಡು ದಿನ ಇದ್ದು ಬರಬಹುದಾಗಿತ್ತು.

ಈ ನಡುವೆ ಬೆಳೆದು ಬರುತ್ತಿದ್ದ ಈ ಹೆಣ್ಣಿಗೆ ಅದರ ತಂದೆಯ ಪರಿ ಚಯವು ಅವಶ್ಯವೆನಿಸಿತು. ರೂಪಾ ಹೇಳುವುದು ಹೇಗೆಂದು ಅನುಮಾನಿ ಸುತ್ತಿರುವಾಗ, ಸುರುಗಿಯೇ ಕೇಳಿಬಿಟ್ಟಳು—"ಅಮ್ಮಾ! ನನ್ನ ಅಪ್ಪನನ್ನು ನಾನು ನೋಡಬೇಕು. ಅವರ ಹಣದಲ್ಲಿ ಬೆಳೆಯುತ್ತಾ ಇದ್ದೇನೆ. ಅವರನ್ನು ನೋಡಿ ಬರಬೇಡವೆ! ಅಥವ ಅಲ್ಲೇ ಹೋಗಿ ನಿಂತುಬಿಡೋಣ. ಅದೇ ನಮ್ಮ ನಿನ್ನ ಹಟ. ನಾನು ನಿಮ್ಮಿಬ್ಬರಿಗೂ ರಾಜಿಮಾಡಿಸುತ್ತೇನೆ ಕಣಮ್ಮ. ನಾನು ಅವನನ್ನು ಅವರು ಇವರು, ಎನ್ನಬೇಕೇನಮ್ಮ ಆನಂದಾವಧಾನಿ ಗಳನ್ನು ತೋರಿಸಮ್ಮ ನನಗೆ. ನೋಡಮ್ಮ ಈದಿನ ಆ ಹಳೇಪೆಟ್ಟಿಗೆಯಲ್ಲಿ

ಸಿಕ್ಕಿತಮ್ಮ ಈ ಲಗ್ನಪತ್ರಿಕೆಯೂ ಮತ್ತು ತಪಸೀರೂ, ಹಾಗು ಈ ಕಾಗದ ಸಹ. ಇಲ್ಲಿಯೇಕಮ್ಮ ಇರುವುದು? ಆ ಹಳ್ಳಿಗೇಕಮ್ಮ ಹೋಗುವುದು? ಅಮ್ಮ ನನ್ನ ಅಪ್ಪನನ್ನೇ ನನಗೆ ತೋರಿಸಬಾರದೇನಮ್ಮ!" ಹೀಗೆಲ್ಲ ಸುರುಗಿ ಕೇಳಿದಾಗ ರೂಪಾದೇವಿಗೆ ಬಹು ಸಂಕಟವಾಗುತ್ತಿತ್ತು. ಬೆಳೆಯುವ ಈ ಕನ್ನೆ ವಿಚಾರ ದೀವಿಟಗೆ ಹಿಡಿದುಕೊಂಡು ಹೊರಟಿದ್ದಾಳೆ. ತನ್ನ ದೀವಟಿಗೆ ತನಗೆ ತೋರಿಸುವ ತತ್ವಾದಿಗಳನ್ನು ತಾಯಿಗೆ ವಿವರಿಸಿ ಹೇಳುತ್ತಿದ್ದಳು. ತಿಳಿಯದ ವಿಚಾರಗಳನ್ನು, ಕೇಳಿ ತಿಳಿದುಕೊಳ್ಳುತ್ತಿದ್ದಳು. ಈಗ ಈ ಪ್ರಶ್ನೆಗೆ ರೂಪಾ ಹೇಳುವುದಕ್ಕೆ ಉತ್ತರವೆಲ್ಲಿದೆ? ಏನು ಹೇಳಬೇಕು? ಹೇಗೆ ಹೇಳಬೇಕು?" ಎಂಬ ತೊಡಕಿನಲ್ಲಿ ಸಿಲುಕಿ ಸರಿಯಾದ ಸಮಯಕ್ಕಾಗಿ ಕಾದಿದ್ದಳು.

—"ಮಗಳೇ ನಾನು ದಾರಿ ತಪ್ಪಿದೆ!" ಎನ್ನಬಹುದೆ? "ಹಟ ಮಾಡಿ ಗಾಂಧರ್ವರೀತಿಯಲ್ಲಿ ನಿನ್ನನ್ನು ಪಡೆದೆ. ಈ ಪೂಜಾರಿ ನಿನ್ನ ತಂದೆಯಲ್ಲ, ಆತನೇ ನಿನ್ನ ಧರ್ಮದ ತಂದೆ. ನೀನು ಆತನನ್ನೇ ತಂದೆಯೆಂದು ಕರೆಯಬೇಕು. ನನ್ನ ಪಕ್ಕದಲ್ಲಿ ಈತನಿದ್ದರೂ, ನನ್ನ ಹೃದಯದಲ್ಲಿ ಆತನೇ ಇದ್ದಾನೆ. ನೀನು ಆತನನ್ನೇ ನಂಬು. ಆತನ ಆಸ್ತಿಯನ್ನೆಲ್ಲ, ನೀನೇ ಪಡೆದುಕೊ!"—ಎಂದು ಹೇಳಿದರೆ ಸರಿಯೆ? ಹೀಗೆಲ್ಲ ಹೇಳಿಕೊಳ್ಳಬೇಕಾದ ಸಂಭವವು ಎಲ್ಲ ತಾಯಿಯರಿಗೂ ಸಾಧಾರಣವಾಗಿ ಬರುವುದಿಲ್ಲ. ಈಗ ಏನು ಹೇಳಿದರೆ ಅದೆಲ್ಲ ಸುರುಗಿಗೆ ಮುಂದಿನ ಜೀವನದ ಬುತ್ತಿಯಾಗಿ ಬಿಡುವುದು. ಆದುದರಿಂದ ಆ ಕ್ಷಣವೇ ಯಾವುದನ್ನೂ ಹೇಳದೆ, ಸರಿಯಾದ ಸಮಯಕ್ಕೆ ಕಾದಿದ್ದಳು.

ಗಂಡಿಗೆ ಗಂಡಾಗಿ ಹೆಣ್ಣಿಗೆ ಹೆಣ್ಣಾಗಿ ತನ್ನ ಮಗಳನ್ನು ಸಾಕಿದಳು. ಅವಳ ನೆವದಲ್ಲಿ ಒಂದು ನರ್ತನ ಶಾಲೆಯನ್ನು ಏರ್ಪಡಿಸಿದಳು. ಅಲ್ಲೇ ಸ್ವಲ್ಪ ಭಾಷಾಜ್ಞಾನ ಬರುವ ರೀತಿಯಾಗಿ ಪಾಠಪ್ರವಚನಕ್ಕೆ ಏರ್ಪಾಡುಮಾಡಿದಳು. ಸುರುಗಿ ಸುತ್ತಮುತ್ತ ಎಲ್ಲರಿಗೂ ಅಚ್ಚುಮೆಚ್ಚಾಗಿದ್ದಳು ಮಾತ್ರವಲ್ಲದೆ, ಬೆಂಗಳೂರಲ್ಲಿ ಅನೇಕ ಸಂಸ್ಥೆಗಳ ಪರವಾಗಿ ನರ್ತನ ಪ್ರಸಂಗಗಳನ್ನು ಏರ್ಪಡಿಸಿ ಸಂದಾಯವಾದ ಹಣವನ್ನು ಧರ್ಮಸಂಸ್ಥೆಗಳಿಗೆ ಕೊಟ್ಟು ಬಿಟ್ಟಳು. ಸುಮಂಗಲೀ ಭಂಡಾರದಲ್ಲಿ ವ್ಯಾಪಾರ ಚೆನ್ನಾಗಿ ನಡೆಯುತ್ತಿತ್ತು.

ಸುರುಗಿ ಅಲ್ಲಿದ್ದರೆ ಹೆಂಗಸರು ತಂಡ ತಂಡವಾಗಿ ಬಂದು ಮೆಚ್ಚಿದ ಪದಾರ್ಥ ಗಳನ್ನು ಕೊಳ್ಳುತ್ತಿದ್ದರು. ಗಂಡಸರು ಬಂದರೂ ವೈಯಾರವಿಲ್ಲದ ಈ ಹೆಣ್ಣನ್ನು ನೋಡಿ, ಅವರು ಸಂತಸಗೊಂಡು ವ್ಯವಹರಿಸುತ್ತಿದ್ದರು. ಈ ರೀತಿ ಅಂಗಡಿ ವ್ಯಾಪಾರದಿಂದ ಅಲ್ಲದೆ, ಆನಂದಾವಧಾನಿಯವರು ಕೊಟ್ಟ ಚಕ್ಕುಬುಕ್ಕು ಯಾವಾಗ ಬೇಕಾದರೂ ನೆರವಿಗೆ ಬರುತ್ತಿತ್ತು.

೯

ರೂಪಾದೇವಿಯು ಸುರುಗಿಯ ವಿಕಾಸವನ್ನು ಕಂಡು ಹಿಗ್ಗಿದಳು. ಅವಳ ಆಸೆಯೆಲ್ಲ ಫಲಿಸಿತು. ಒಂದೇ ಒಂದು ಸಾಧನೆಮಾತ್ರ ಉಳಿದಿತ್ತು. ಅದು ಹಟ ಸಾಧನೆ. ತನ್ನ ಹಟಸಾಧನೆಗೆ ಈ ಸುರುಗಿಯು ಒಂದು ತೀಕ್ಷ್ಣ ಖಡ್ಗವಾಗಿರುವಳೆಂದು ಅರಿತು ಅವಳನ್ನು ಬೊಂಬಾಯಿಗೆ ಕಳಿಸುವ ಯೋಚನೆಯಲ್ಲಿ ಬಹುದಿನ ಕಳೆದಳು. ಒಂದು ದಿನ ತೀರ್ಮಾನಕ್ಕೆ ಬಂದು ಒಂದು ಕಾಗದ ಬರೆದಳು.

ಧರ್ಮಪತಿಯಾದ ಶ್ರೀ ಆನಂದಾವಧಾನಿಯವರಲ್ಲಿ—ನಿಮ್ಮ ಧರ್ಮ ಪುತ್ರಿಯಾದ ಸುರುಗಿ ದೇವಿಯ ಹೆಸರನ್ನು ನೀವಾಗಲೇ ಅನೇಕ ಪತ್ರಿಕೆ ಗಳಲ್ಲಿ ಓದಿರಬಹುದು. ನಾನು ಆಕೆಯನ್ನು ನಿಮ್ಮ ಅಂತಸ್ತಿಗೆ ತಕ್ಕಂತೆ ತಯಾರಿಸಿದ್ದೇನೆ. ವಿದ್ಯ, ಬುದ್ಧಿ, ನೃತ್ಯ, ಗೀತ, ಲಾವಣ್ಯ ಮತ್ತು ನೈಪುಣ್ಯದಲ್ಲಿ ಈಗಿನ ಯುವತಿಯರನ್ನು ಮೀರಿಸಿದ್ದಾಳೆ. ಇನ್ನು ನನ್ನ ಹಗಲು ಕಳೆಯಿತು. ರಾತ್ರಿ ಆರಂಭವಾಯಿತು. ನನ್ನ ಆಸೆಯ ಸೂರ್ಯ ಮುಳುಗಿದ್ದಾನೆ. ಹಟವೊಂದು ಉಳಿದಿದೆ. ಅದನ್ನು ಸಾಧಿಸಿಕೊಳ್ಳಲು ನಿಮ್ಮ ಸಹಾಯವು ಅತ್ಯವಶ್ಯಕ. ಹೀಗೆ ಕೇಳಬಾರದಲ್ಲವೆ. ದಾಕ್ಷಿಣ್ಯ ತನವಿದ್ದರೆ ಸಾಧಿಸಿಕೊಳ್ಳಬೇಕು ; ಇಲ್ಲದಿದ್ದರೆ ಸಮ್ಮತ ಹೊಡಿಯಬೇಕೆಂಬಿ ರೇನು? ನಿಮ್ಮನ್ನು ಸೋಲಿಸಿ ನಾನು ಗೆಲ್ಲುವ ಆಸೆ ಇತ್ತು ಒಮ್ಮೆ, ಈಗ ಲಾದರೊ ನಾನೇ ಸೋತು, ನಿಮ್ಮನ್ನು ಗೆಲ್ಲುವ ಉಪಾಯ ಹೂಡಿದ್ದೇನೆ.

ಈ ಪ್ರೌಢೆ ನಿಮ್ಮ ಪುತ್ರಿ, ಧರ್ಮಪುತ್ರಿ. ಒಪ್ಪಿಸಿಕೊಳ್ಳಿ. ಉಳಿದು ದೆಲ್ಲ ಎದುರಲ್ಲಿ ನಿಂತು ಹೇಳಲು ಈ ಜನ್ಮದಲ್ಲಿ ಸಾಧ್ಯವಿರಲಾರದು.

ಆದುದರಿಂದ....ಅನಂತಾನಂತ ವಂದನೆಗಳು—

ಬೆಂಗಳೂರು. ಇಂತೀ ನಿಮ್ಮ "ಪಾರೂ"

ಈ ಕಾಗದದ ಸಂಗಡ ಸುರುಗಿಗೊಂದು ಬರೆದು ಲಕೋಟೆಯಲ್ಲಿಟ್ಟು ಭದ್ರಪಡಿಸಿದಳು. ಸುರುಗಿದೇವಿಗೆ ಬರೆದುದರಲ್ಲಿ ಪಾರ್ವತಿದೇವಿ ಪಾರೂ ಆಗಿ ರೂಪಾ ಆಗಿ ಪುನಹಾ ಪಾರೂ ಆಗಲು ಪ್ರಯತ್ನಪಟ್ಟ ಜೀವನ ಚರಿತ್ರೆ ಸಂಪೂರ್ಣವಾಗಿತ್ತು. ಯಾವ ಮುಚ್ಚುಮರೆಯೂ ಇರಲಿಲ್ಲ. ಮುಚ್ಚು ಮರೆ ತಾನೆ ಏಕೆ? ಬೆಳೆಯುವ ಹುಡುಗಿಗೆ ಸರಿಯಾದ ದಾರಿ ತೋರಿಸ ಬೇಕು. ಪಾರು ನಿಂತಲ್ಲಿ ಸುರುಗಿ ಕುಡಿಕಂಡು ಕವಲೊಡೆಯಬೇಕು.

ಸುರುಗಿದೇವಿ ಬೆಂಗಳೂರಲ್ಲಿ ಎಲ್ಲೆಲ್ಲೂ ಹೆಸರಾಂತ ಯುವತಿಯಾದಳು. ಯಾವ ಸಂಘ, ಸಭೆ, ಕೂಟ, ಮತ್ತಿನ್ನಾವ ಸಾಹಸಕ್ಕೆ 'ಕೈಯ್ಯಿಟ್ಟರೂ ಅದನ್ನು ಉಘೇ ಎನ್ನಿಸಿಬಿಡುವಳು. ಅವಳನ್ನು ಕಂಡವರಿಗೆ ಅವಳೊಂದು ಸಾಹಸ ಪುತ್ಥಳಿಯೆನ್ನಿಸುತಿತ್ತೇ ಹೊರತು, ಅವಳು ಹೆಣ್ಣೊಂದು ಕಾಮುಕತೆ ಯಾರ ಮನಸಿನಲ್ಲೂ ಉದಯಿಸದು. ಹಾದಿಯಲ್ಲಿ, ಬಸ್ಸಿನಲ್ಲಿ, ಅಥವ ಇನ್ನೆಲ್ಲಿ ಅವಳು ಬಂದು ಹೋದರೂ ಒಂದು ಹೊಸ ತೇಜಸ್ಸು' ರೂಪಾಂತ ರೀತಿಯಾಗಿರುತ್ತಿತ್ತು. ಅವಳ ಉಡುಪು, ಅವಳ ಮುಡಿ, ಅವಳ ತೊಡ ವುಗಳು ಯಾವುವೂ ಇತರರ ಕಣ್ಣಿಗೆ ಬೀಳುತ್ತಿರಲಿಲ್ಲ. ಸುರುಗಿ ಬಂದ ಳೆಂಬುವರೇ ವಿನಾ ಅವಳ ಬಟ್ಟೆಬರೆ ವಿಚಾರ ಹೇಳುತ್ತಿರಲಿಲ್ಲ. ಅವಳೊಂದು ತುಂಬು ಹೊಳೆಯಾಗಿದ್ದಳು.

## ೧೦

ರೂಪಾದೇವಿಯು ಮತ್ತೊಮ್ಮೆ ಪಾದಳ್ಳಿಗೆ ಹೋದವಳು ಹಿಂತಿರುಗ ಲಿಲ್ಲ. ಚಿತ್ತುಪೂಜಾರಿ ಬೆಂಗಳೂರಲ್ಲಿ ಬಂದು ನಿಂತನು. ಸುಮಂಗಲೀ ಬಂಡಾರ ಬಡಾಯಿಸಿ ಬೆಳೆಯಿತು. ರೂಪಾದೇವಿ ಬೊಂಬಾಯಿಗೆ ಹೋಗುವ ಪ್ರಯತ್ನಮಾಡಿದಳು. ಆನಂದಾವಧಾನಿಗೆ ಪತ್ರ ಹೋಯಿತು. ಆತನು ಮಗಳನ್ನು ನೋಡುವ ಆತುರದಲ್ಲಿ ಮಾರುತ್ತರ ಬರೆದನು. ಚಿತ್ತು ಪೂಜಾರಿಯು ಸಂಗಡ ಹೊರಡುವ ಏರ್ಪಾಡೂ ಆಯಿತು. ಅಂಗಡಿ ನೋಡಿಕೊಳ್ಳಲು ಸುರುಗಿಯು ಗೆಳತಿಯೊಬ್ಬಳು ಒಪ್ಪಿದಳು.

ಈ ನಡುವೆ ಕಲ್ಪಕಲಾ ಕೂಟದವರು ತಿರುಗಾಟ ಹೊರಟರು. ಆ ಕೂಟ ಅಧಿದೇವಿಯಾದ ಸುರುಗಿಯೂ ಹೊರಟಳು. ಸಾಧ್ಯವಾದರೆ ಬೊಂಬಾಯಿಗೂ ಹೋಗಿ ಬರುವ ಯೋಚನೆಯಿತ್ತು. ಹಾಗೆ ಜಿ.ಎ. ದಾನಿಯವರಲ್ಲಿಗೆ ಹೋಗಿ ಸಂದರ್ಭಾನುಸಾರ ಮಾತುಕತೆಯಾಗಿ, ಆತನ ನಾಡಿ ಹಿಡಿದು ನೋಡಿ ಬರುವ ಆಸೆಯೂ ಇತ್ತು.

ಕಲ್ಪಕಲಾ ಕೂಟವು ಮಿರಜಿಗೆ ಹೋಗಿತ್ತು. ದಾರಿಯಲ್ಲಿ ನಡೆದ ನರ್ತನ ಗೀತಾದಿಗಳ ಕೀರ್ತಿಯು ಇವರಿಗೆ ಮುಂಚೆ ಭಾರತವಲ್ಲೆಲ್ಲ ಹರಡಿತ್ತು. ಮಿರಜಿಯ ಮಕ್ಕಳೆಲ್ಲ ಪತ್ರಿಕೆಗಳಲ್ಲಿನ ತಸಬೀರು ನೋಡಿದ್ದುದರಿಂದ ಸುರುಗಿಯನ್ನು ಗುರುತಿಸುವುದು ಅವರಿಗೆ ಕಷ್ಟವೆನಿಸಲಿಲ್ಲ. ಐದಾರು ಗಂಡಸರು ಮತ್ತು ಏಳೆಂಟು ಹೆಂಗಸರ ನಡುವೆ ಸುರುಗಿಯನ್ನು ಬೆಟ್ಟುಮಾಡಿ ತೋರಿಸುತ್ತಿದ್ದರು. ಸುರುಗಿಯನ್ನು ಕಂಡರೆ ಪ್ರಥಮ ದರ್ಶನಕ್ಕೇ ಗೌರವ ಮೂಡುತಿತ್ತು.

ಆನಂದಾವಧಾನಿಯು ಮಿರಜಿಯಲ್ಲಿ ಸುರುಗಿಯ ನರ್ತನ ಗೀತಾಳಿಗಳಿಂದ ಮುಗ್ಧನಾಗಿದ್ದನು. ಸುರುಗಿಯು ನೆಲೆಗೆ ನಿಂತ ತಾರೆಯಲ್ಲವೆಂದು ಅರಿತು, ಅವಳಿಂದ ತಾನು ಸ್ವಲ್ಪವಾದರೂ ಲಾಭಹೊಂದುವ ಆಸೆಯಿಂದ, ತನ್ನ ಬಂಗಲಿಗೆ ಬರಮಾಡಿಕೊಳ್ಳುವ ಆಸೆಯಿತ್ತು. ಆದರೆ ಸುರುಗಿಯು ಹಾಗೆ ಯಾರಲ್ಲಿಗೂ ಹೋಗುವವಳಲ್ಲವೆಂದು ತಿಳಿದನು. ಆದುದರಿಂದ ತಾನೇ ಆಕೆಯಲ್ಲಿಗೆ ಸಂಜೆ ಬಂದನು. ಸುರುಗಿಯು ಕೋಣೆಯಲ್ಲಿ ಇತ್ತಿಂದತ್ತ ತಿರುಗುತ್ತ ಆ ರಾತ್ರಿಯ ಶಾಮಲಾ ನರ್ತನಕ್ಕೆ ಅವಶ್ಯವಾದ ಪರಿಕರಗಳನ್ನು ನೆನೆಯುತ್ತಿದ್ದಳು. ನೋಡ ಬಂದ ಸಾಹುಕಾರನು ಯುವಕನಲ್ಲವೆಂದ ಮೇಲೆ ನೇರಾಗಿ ಸುರುಗಿಯ ಕೊಟಡಿಗೆ ತಲುಪಲು ಅವಕಾಶವಾಯಿತು.

" ನಾನು ಬಂದಿದ್ದೇನೆ ಈ ವಿಳಾಸದ ಚೀಟಿ ನೋಡುವಿಯಾ ? "

" ಆ ಕಾಲುಮಣೆಯ ಮೇಲೆ ಇಟ್ಟು ಬಾಗಿಲು ಬಳಿ ಕುರ್ಚಿಯಲ್ಲಿರಿ. "

" ಕುಳಿತು ಕುಳಿತು ಸಾಕಾಗಿದೆ. ಈಗ ಸ್ವಲ್ಪ ಕೆಲಸವಿದೆ ಅದಕ್ಕೆ ಸ್ವಲ್ಪ ಗಮನಕೊಡು. ಐದೇ ನಿಮಿಷ ! "

" ನನ್ನ ಕೋಣೆಯಲ್ಲೆ ಐದು ನಿಮಿಷ ಕೂತುಕೊಳ್ಳಿ.

" ಇಲ್ಲ ಸಾಧ್ಯವಿಲ್ಲ ನಾನು ಬೊಂಬಾಯಲ್ಲಿ ಹತ್ತು ನಾಟಕ ಮಂದಿರಗಳ ರಾಜ."

" ಹೋಗಿ ನಿಮ್ಮ ರಾಣಿ ಸಾಹೇಬರನ್ನು ಕಳಿಸಿಕೊಡಿ."

ಈ ರೀತಿಯಾಗಿ ಮಾತಾಡುವಾಗ ಸುರುಗಿಯು ಆನಂದರಾಯನ ಮೋರೆಯನ್ನು ನೋಡಿರಲಿಲ್ಲ. ತನ್ನ ಕಾರ್ಯದಲ್ಲಿ ತತ್ಪರಳಾಗಿದ್ದಳು. ಹರಿತಮಾಡುತ್ತಿದ್ದ ಮನಸಿನ ಕಿಡಿಗಳಂತೆ ಆ ವಯಸ್ಕನ ಕಡೆಗೆ ಕೆಲವು ಕಿಡಿಗಳು ಹಾರುತ್ತಿದ್ದವು ಆನಂದಾವಧಾನಿಯು ಈ ತರುಣಿಯನ್ನು ನೋಡಿ ಮುಗ್ಧನಾದನು. ಆಕೆಯನ್ನು ತನ್ನವಳನ್ನಾಗಿಮಾಡಿಕೊಳ್ಳುವ ಆಸೆ ಹೆಚ್ಚಿತು. ಏಕೆ, ಏತಕ್ಕೆ, ಎಂಬ ಪ್ರಶ್ನೆಗಳು ಹುಟ್ಟುವುದಕ್ಕೇ ಎಡೆಗೊಡದೆ, ಆನಂದಾವದಾನಿಯು ಬಾಗಿಲಿಗೆ ಅಡ್ಡಾಗಿ ತನ್ನ ಕುರ್ಚಿಯನ್ನು ಜರುಗಿಸಿದನು. ಸುರುಗಿಯು ಕಡಗೆ ಮೆಲ್ಲಗೆ ಹೆಜ್ಜೆಯಿಟ್ಟನು.

" ನಿನ್ನ ಹೆಸರು ಕಲಾವತಿಯೋ, ಸುರುಗಿಯೋ ? "

" ಕಾರಣ, ನೀವು ಹಾಗೆ ಕೇಳುವುದಕ್ಕೆ ? "

" ನಿನ್ನನ್ನು ಕಂಡು, ಹೆಸರು ಹಿಡಿದು ಕರೆದು ಕೈ ಕುಲಿಕಿ ಹೋಗೋಣವೆಂದು ಆಸೆ. ಉಳಿದ ವಿಚಾರವೆಲ್ಲ ನಿಮ್ಮ ಕಾರ್ಯದರ್ಶಿಯವರ ಸಂಗಡ ಮಾತಾಡಬಹುದಲ್ಲ."

" ನಿಮಗೆ ಹೆಂಗುಸಿನ ಹಂಬಲವಿದ್ದರೆ, ಅಲ್ಲೇ ಹೋಗಿರಿ, ಅಲ್ಲಿ ಏನಾದರೂ ಮಾತಾಡಿ ತೀರ್ಮಾನಮಾಡಿಕೊಳ್ಳಬಹುದು. ಆಕೆಯೂ ನಿಮ್ಮೂರಿನವರೇ, ನಿಮ್ಮ ವಯಸ್ಸಿಗೆ ತಕ್ಕವರು."

" ನನ್ನ ವಯಸ್ಸಿಗೆ ತಕ್ಕವರಲ್ಲ ನನಗೆ ಬೇಕಾದವರು ! "

" ಇನ್ನೆಂತವರು ! "

" ನಿನ್ನಂತವರು ! "

ಹೀಗೆಂದು ಸರ್‍ರನೆ ಮುಂದೆ ಹೋಗಿ ಆಕೆಯನ್ನು ತಬ್ಬಿಕೊಂಡನು. ಸುರುಗಿಯ ಮನಸಿನಲ್ಲಿ ಆ ಕ್ಷಣದಲ್ಲಿ ಹತ್ತು ಸಹಸ್ರ ನೆನಪುಗಳು ಮೂಡಿ ಮಾಯವಾದವು. ಏನು ಮಾಡುವುದಕ್ಕೂ ತೋಚಲಿಲ್ಲ. ತಬ್ಬಿಕೊಂಡವನನ್ನು ಒಂದು ಕೈಲಿ ಬಿಗಿಹಿಡಿದು ಮತ್ತೊಂದು ಕೈಯಲ್ಲಿ ಆತನ ತಲೆಗೂದಲನ್ನು ಹಿಂದೆಳೆದು ಹಿಡಿದು ಮೋರೆ ನೋಡಿದಳು. ಕೆಂಪಡರಿದ ಆ ಮುದಿ

ಮೋರೆಯಲಿ, ಆಕೆಗೆ ಯಾವುದೋ ಒಂದು ನೆನಹಿನ ಕಿಡಿ ಕಾಣಿಸಿತು. ಆಗ ಆತನನ್ನೂ ಎತ್ತಿಕೊಂಡು ಹೋಗಿ ಸೋಫಾದಲ್ಲಿ ಕೂರಿಸಿದಳು. ತಾನು ಆತನೆದುರು ಕುಳಿತಳು.

" ನೀವೇನು ಜಿ. ಎ. ದಾನಿ ? "

" ಹೌದು ಆನಂದಾವಧಾನಿ ! "

" ಏನು ನಿಮ್ಮ ಭಾವನೆ ? "

" ನೀನೇ ಬಲ್ಲೆ ! "

" ಪ್ರಖ್ಯಾತಳಾದ ಸಿನಿಮ ತಾರೆ ಸಿಕ್ಕಿದರೆ ಅವಳ ವಶಕ್ಕೆ ನಿಮ್ಮ ನರ್ತನ ಮಂದಿರಗಳನ್ನೆಲ್ಲ ಒಪ್ಪಿಸಿಬಿಟ್ಟು........"

" ಇಲ್ಲ, ಅಷ್ಟೇ ಅಲ್ಲ ! ನನ್ನನ್ನೂ ನನ್ನ ಸಕಲ ಐಶ್ವರ್ಯವನ್ನೂ ಸಹ "

" ಖಂಡಿತವಾದ ಮನಸಿದ್ದರೆ ಬರೆದುಕೊಡಿ."

" ಏನೆಂತ ? "

" ನಾನು ನಿನ್ನವನು, ನನ್ನ ಆಸ್ತಿಪಾಸ್ತಿ ನಿನ್ನದು."

" ಬರೆದೆ. ಈಗ ಬಹಳ ಆನಂದವಾಯಿತು."

" ನಿಮ್ಮ ಹೆಸರು, ವಿಳಾಸ ಹಾಕಿರಿ."

" ಎಲ್ಲ ಆಗಿದೆ. ಇನ್ನೊಮ್ಮೆ ತಬ್ಬಿಕೊಂಡು ಒಂದೇ ಒಂದು ಮುತ್ತೂ ಕೊಟ್ಟರೆ........"

" ಓಹೋ ಸಾವಿರ ಗಟ್ಟಳೆ ಸರಸರವಾಗಿ ಕೊಡುವುದಾಗುತ್ತೆ"

" ಯಾವಾಗ ? "

" ಈಗೊಮ್ಮೆ ಅನಂತರ ಈ ಕಾಗದ ಓದಿದನಂತರ ಮತ್ತೊಮ್ಮೆ.... ಆದರೆ ಇನ್ನೊಮ್ಮೆ ಒಪ್ಪಿ ಮುದ್ದಾಡುವಾಗ ನಮ್ಮ ಕಲ್ಪ ಕಲಾ ಕೂಟದವರೆಲ್ಲರ ಎದುರಲ್ಲಿ ತಮ್ಮ ವ್ಯಾಮೋಹವನ್ನು ತೋರಿಸಿಬಿಡಬೇಕು."

" ನೀನೊಪ್ಪಿದರೆ ಆಗ ಹಾಗೇ. ಈಗ ಹತ್ತಿರ ಬರಲಾ........ನನ್ನ ತಲೆಗೂದಲು ಹಿಡಿದು ಎಳೆಯುವುದಿಲ್ಲವಲ್ಲಾ........"

" ಇಲ್ಲ ಬಹುಸಾಧುವಾಗಿರುತ್ತೇನೆ. ತುಟಿಮಾತ್ರ ಹೀರಬೇಡಿರಿ, ಅವಕ್ಕೆ ಈದಿನ ಹಾಕಿದ ಬಣ್ಣ ನಿಮ್ಮಂಥಾ ಮುದುಕರಿಗೆ ಹಿತವಲ್ಲ."

ಗುಂಡಾವಧಾನಿಯ ಪುತ್ರ ವೃದ್ಧ ಆನಂದಾವಧಾನಿಯು, ಮಿರ್ಜೆಯ ಬಂಗಲೆಯೊಂದರಲ್ಲಿ ಸಿನಿಮಾ ತಾರೆಯನ್ನು ತಬ್ಬಿ ಮುದ್ದಾಡಿದನೆಂಬ ವರ್ತಮಾನವು, ಯಾವ ಪತ್ರಿಕೆಯಲ್ಲೂ ಪ್ರಚಾರವಾಗಲಿಲ್ಲ; ಆದರೆ ಜಿ. ಎ. ದಾನಿ ಎಂಬ ಪ್ರಸಿದ್ಧ ಸಾಹುಕಾರನು ಕಳೆದು ಹೋಗಿದ್ದ ತನ್ನ ಪುತ್ರಿಯನ್ನು ಪುನಃ ಪಡೆದುಕೊಂಡನೆಂದೂ, ಆಕೆಯು ಪ್ರಸಿದ್ಧ ಕಲಾವಂತೆಯೆಂದೂ, ಆಕೆಯೇ ಸುರುಗಿಯೆಂದೂ ಪ್ರಚಾರವಾಯಿತು.

**ಆಗಬಾರದಿತ್ತೆ ?**

# ೮. ಮಸೀಕಾಣಿಕೆ

" ಯಾರು ಬಂದಿದ್ದವರು ?"

" ಕಪಿಲಾ ಸಂಪಾದಕರು."

" ಏನಂತೆ ?"

" ಅದರ ಉದಯ ದಿನಕ್ಕೆ ಒಂದು ವಿಶೇಷಾಂಕ ತೆಗೆಯುತ್ತಾರಂತೆ ?"

" ತೆಗೆದೇ ಬಿಡಲಿ. ನಿಮಗೇಕೆ ಅದರ ಕೋಟಲೆ ?"

" ಏನಾದರೂ ಬರೆದುಕೊಡಿ ಅಂತ ಬಂದಿದ್ದರು."

" ಏನು ಯಥಾಪ್ರಕಾರ ಪ್ರಚಾರ ಮಾಡಿಸಿ ಭಾಷಾಂತರಪಡಿಸಿ ಇಡೀ ಭಾರತಕ್ಕೆಲ್ಲ ಜಾಹೀರಾತು ಹೊರಡಿಸಿ ನಿಮ್ಮ ಹೆಸರು ಹೆಗ್ಗಾಳೆ ಹಿಡಿಸಿ ಬಿಡುತ್ತಾರಂತೇನು ?"

" ಅದೇನೇ, ನೀನೇಕೆ ಹೀಗೆ ಹಿಗ್ಗಾ ಮುಗ್ಗಾ ಹಿಡಿದೆಳೆಯುತ್ತಿ ! ಒಂದು ಕಡೆ ಲಗಾಮು, ಇನ್ನೊಂದು ಕಡೆ ಬಿರಿ "

" ಬಿರಿಯೋ ಸಿರಿಯೋ, ನೀವು ಆ ಕಪಿಲಾ ಪತ್ರಿಕೆಗೆ ಖಂಡಿತಾ ಬರಿಯಬಾರದು. ನಿಮ್ಮ ಬರವಣಿಗೆಗೆಲ್ಲ ಇನ್ನು ಮುಂದೆ ನಾನು ಬೇರೆ ಏರ್ಪಾಡೆಲ್ಲ ಮಾಡಿಬಿಟ್ಟಿದ್ದೇನೆ."

" ನಾನು ಬರಿಯೋದೆ ಸರಿ ಕಪಿಲಾ ಪತ್ರಿಕೆಗೆ. ಅದೇನು ನಿನ್ನ ನಿರ್ಬಂಧ ? ಖಂಡಿತ ರಸವತ್ತಾದ, ಹಿಂಡಿದರೆ ಕಣ್ಣೀರು ಸುರಿಯುವಂಥ ಕಥೆಯನ್ನು ಬರೆದು ಕೊಡುವುದೇ ಸರಿ. ಏನು ಮಾಡೀಯೇ ನೀನು ?

ಶಾಂತವಾಗಿ ಕೂತು ಬರೆದು ಸಮಾಧಾನ ಹೊಂದಬೇಕು. ಈ ದಿನ ಗಿರಣಿ ಚಕ್ರಗಳೆಲ್ಲ ತಿರುಗುವುದನ್ನು ನೋಡಿ ನೋಡಿ ತಲೆಯೊಳಗೆಲ್ಲ ಗಿರಗಿಟ್ಟಿ ಆಡುತಾ ಇದೆ. ಬರೀತೇನೆ, ಬರೀತೇನೆ, ಬರೀ ......."

"ಬರೀರಪ್ಪ, ಹಾಗಾದರೆ, ನೋಡೋಣ, ನಾನೂ ಹಟ ಹಿಡೀತೇನೆ."

"ನೀನು ಮಾತ್ರ ಹಟ ಹಿಡೀಬೇಡ ಲೀಲಾ. ನಿನ್ನೆದುರು ನಾನು ಕಲ್ಲಾಗಿ ನಿಲ್ಲಲಾರೆ. ಈ ಲೇಖನೀ ಮಸಿ ಬರಹಗಳ ವಿಚಾರಕ್ಕೆ ನೀನು ಬರಬಾರದು. ಹಣ ಕೊಡೋ ದೇವರು ಎಲ್ಲಾದರೂ ಕೊಡಲಾರನೆ. ನಾನೇನು ಶ್ಯಾನುಭೋಗನೆ ಎಲ್ಲರಿಂದಲೂ ಮಸೀಕಾಣಿಕೆ ಬೇಕೆನ್ನುವುದಕ್ಕೆ?"

"ಉಹೂ, ಮಸೀ ಕಾಣಿಕೆಯಲ್ಲ, ರಕ್ತ ಕಾಣಿಕೆ ಬೇಕು. ಅಂಬರ ಪತ್ರಿಕೆಗೆ ಬರೆದು ಕೊಡಿ, ಒಳ್ಳೆ ನಕಾಸೆ ಕೆಲಸ ಮಾಡಿಬಿಡಿ. ಯಾವ ಭಾಷೆಗಾದರೂ ಭಾಷಾಂತರವಾಗುವ ಹಾಗೇ ಇರಲಿ. ನಿಮ್ಮ ಲೇಖನಿಗೆ ಅದು ಸಾಧ್ಯ. ನಾನು ಕೊಡಿಸುತ್ತೇನೆ ಬಂಗಾರದ ಕಾಣಿಕೆ!

"ನಾನೆಲ್ಲಿ, ಅಂಬರ ಪತ್ರಿಕೆಯೆಲ್ಲಿ! ಆದರಲ್ಲಿ ಆ ಮೂರು ತಿಂಗಳ ಹಿಂದೆ ಬಂದಿತಲ್ಲ, ನೀಲಾ ಕತೆ, ಅದರಂತ ಕಥಾರಚನೆಯನ್ನೇ ನಾನೆಲ್ಲೂ ಕಂಡಿಲ್ಲ. ಅದೇ ಮತ್ತೆ ಬಂದಿತ್ತು ಇಂಗ್ಲೀಷಿನಲ್ಲಿ ಸಹ, ಇನ್ನೊಂದು ಪತ್ರಿಕೆಯಲ್ಲಿ. ನಾನು ಅಂಥಾದೇನೂ ಅಕ್ಷರಚಿತ್ರ ಈ ಜನ್ಮದಲ್ಲಿ ಬರೆಯುವಂತಿಲ್ಲ."

"ನಾಳೆ ಬೆಳಗಿನೊಳಗೆ ನಿಮಗೆ ಅಂಥ ಶಕ್ತಿ ಇದೆಯೆಂದು ನಾನೇ ತೋರಿಸುತ್ತೇನೆ. ಆಗ ಬರೆಯುವಿರಾ? ನೀವು ಬರೆದ ಕಥೆ ಇಂಗ್ಲೀಷೂ, ಹಿಂದೀ, ಬಂಗಾಳಾಲೀ ಸಹ ರೂಪುಗೊಂಡು ಬರುವಂತೆ ನಾನು ಏರ್ಪಾಟು ಮಾಡುತ್ತೇನೆ. ಬರೆಯಿರೀಂದ್ರೇ!"

"ಆದ್ರೇ, ನೀನೊಂದು ಮಾತು ಕೊಟ್ಟರೆ."

"ಏನು ಹೇಳಿ? ಹುಚ್ಚಾಪಟ್ಟೆ ಹುಡುಗಾಟ ನೀವು ಆಡುವುದಾದರೆ ಖಂಡಿತ ಆಗುವುದಿಲ್ಲ."

"ಏನೂ ಇಲ್ಲ ಹುಚ್ಚಾಪಟ್ಟೆ. ಒಂದೇ ಒಂದು ವಿಚಾರವಿದೆ. ಇನ್ನು ಮೇಲೆ—ನೀವು, ರೀ, ಏನೂಂದ್ರೆ ಮೊದಲಾದ ಭಾರದ ಬಹುವಚನವೆಲ್ಲ ಬಿಟ್ಟುಬಿಡಬೇಕು. ನಾನೊಬ್ಬನೇ ಇರುವಾಗ ನೂರಾರು ಜನ ಇರುವ

ಹಾಗೆ ನನ್ನ ನೀನು ಭಾವಿಸಬಾರದು. ಏನು ಹೇಳು ಮತ್ತೆ, ನಾನು ಕೊಡುತ್ತೇನೆ ಸ್ವಾತಂತ್ರ್ಯ! ಪತಿ ದಾಸ್ಯಭಾವ ಹಾಳಾಗಲಿ. ನೀನು ಈಗ ನನ್ನೆದುರಲ್ಲಿ ಆರಂಭಿಸು. ನಿನ್ನ ಚಿರಂಜೀವಿಗಳ ಕಾಲಕ್ಕೆ........"

"ಅದಕ್ಕೆಲ್ಲ ಉತ್ತರ ಈಗಲೇ ಬೇಕೆ? ಹಾಗಾದರೆ ಇಲ್ಲಿಕೇಳಿ. ನೀವೇ ನನಗೆ ಇಡೀ ಪ್ರಪಂಚ. ಸಾವಿರ ಜನ ತೂಕ ನೀವು ನನಗೆ. ಈ ಬಹುವಚನ ಗುಲಾಮರ ಅಂತಿತನವಲ್ಲ. ಆದುದರಿಂದ ನನ್ನ ಹೆಸರ ನ್ನಾದರೂ ಇನ್ನು ಮುಂದೆ ......."

'ಅದೆಲ್ಲ ಆಗುವುದೇ ಇಲ್ಲ. ನೀನು ಈಗ ಮಾತು ಕೊಟ್ಟರೆ ಮಾತ್ರ ಮತ್ತೆ ಮುಂದಿನ ವಿಚಾರ. ಹಿಂದೆ ಆ ಸೇವಾದಳದಲ್ಲಿ, ಆ ಯಾತ್ರೆ ಕಾಲ ದಲ್ಲಿ ಹೇಗೆ ಕರೆಯುತ್ತಿದ್ದೆ ನೋಡು ಹಾಗೆ....'

'ಹಾಗೋ, ಹಾಗಾದರೆ ಕಿವಿಯಲ್ಲಿ ಮಾತ್ರ, ಯಾರಿಗೂ ಕೇಳಿಸದ ಹಾಗೆ. ನನ್ನ ದೇವರನ್ನು ಕೂಗಿ ಕರೆಯುತ್ತೇನೆ. ಅದೂ ಒಂದೇ ಬಾರಿ, ಒಂದೇ ಬಾರಿ ಮಾತ್ರ ಏಕವಚನ, ಜಗದೇಕವಚನ.'

ಹೀಗೆ ಎಷ್ಟು ಸಾರಿ ಮಾತು ಸಲ್ಲಿಸಿದರೂ ಮತ್ತೆ ಮತ್ತೆ ಮತ್ತೇಂತಲೇ ಬೇಡಿಕೆ ಬಂದುದರಿಂದ ಲೀಲಾ ಇನ್ನೊಂದಾದ ಹನ್ನೆರಡನೆ ಸಾರಿ ಗಟ್ಟಿ ಯಾಗಿ-'ನೀನೂ ನನ್ನ ನಲ್ಲ, ನೀನೇ ರಂಗರಾಜ, ನನ್ನ ದೇವರೂ! ಸಾಕೆ ಈಗ'-ಎಂದು ಕೂಗಿ ಮುಗಿಸಿದಳು. ಆಗ ರಂಗರಾಜನಿಗೆ ಪರಮಾನಂದ ವಾಗಿ ಆಕೆಯನ್ನ....ಅಯ್ಯೋ ಅದೆಲ್ಲ ಏಕೇಂದರೆ ನಮಗೆ ನಿಮಗೆ! ಇತ್ತಕಡೆ ಬನ್ನಿ.

ರಂಗರಾಜನಿಗೆ ಲೀಲಾವತಿಯ ವಿಚಾರವಾಗಿ ಎಷ್ಟೋ ವಿಷಯಗಳು ಗೊತ್ತಿರಲಿಲ್ಲ. ತನ್ನ ಸತಿಯ ವಿಚಾರ ಹೇಗೋ ಹಾಗೇ, ತನ್ನ ಸಂಸಾ ರದ ವಿಚಾರವೂ ಗೊತ್ತಿರಲಿಲ್ಲ. ಬರವಣಿಗೆ ತನ್ನದು ಮಾತ್ರ ಗೊತ್ತು ಆ ಪುಣ್ಯಾತ್ಮನಿಗೆ. ಅ, ಆ, ಇ, ಈ, ಕ, ಖ, ಗ, ಘ, ಸಂಪಾದಕರೆಲ್ಲ ಬಂದು ಬರಹ ಬರೆಸಿಕೊಂಡು ಹೋದದ್ದೇ ಹೋದದ್ದು. ಒಬ್ಬರೂ ಒಂದು ಕಾಸೂ ಕೊಟ್ಟಿರಲಿಲ್ಲ. ಎಲ್ಲಾ ಬಿಟ್ಟಿ ಬರಹ!

ಧೂಮಪ್ಪನ ಗಿರಿಣಿಯಲ್ಲೇ ರಂಗರಾಜನಿಗೆ ಕೆಲಸ. ಅಲ್ಲಿ ಎಂಟು ಗಂಟೆ ಮೈ ಸವೆಸುವುದು, ಉಳಿದ ಹದಿನಾರು ಗಂಟೆಗಳಲ್ಲಿ ಆರು ಗಂಟೆಯೇ

ಬರವಣಿಗೆಗೆ. ಮನೆಗೆ ಬಂದರೋ ಲೀಲಾ, ಲೀಲಾ, ಮಾತೆತ್ತಿದರೆ ಲೀಲಾ. ಆವಳಿಗೂ ಆಂ ಊಂಗುಟ್ಟಿ ಬೇಜಾರು ಬಂದರೆ, ಹೀಗೇ ಅಂದು ಬಿಡುವಳು-'ಏನೂಂದರೆ, ನಿಮ್ಮ ಈ ಹಾಳು ಲೀಲಾ ಇಲ್ಲದಿದ್ದರೆ, ಪ್ರಪಂಚ ಮುಳುಗಿ ಹೋಗುತ್ತಯೆ? ಸದ್ಯ ಗಿರಣೀಗೂ ಬಾ ಎಂತ ಬೆರಳಿಗೆ ಸುತ್ತಿ ಕೊಂಡು ಹೋಗುವುದಿಲ್ಲವಲ್ಲ. ಅದೂ....' ಅಂಥ ಸಮಯದಲ್ಲಿ ಹಾಗೆ ಮಾತಾಡಿದ ಬಾಯಿಗೆ ಬೀಗಮುದ್ರೆ ಬೀಳುತ್ತಿತ್ತು. ಇದೆಲ್ಲ ಕೇಳಿದರೆ, 'ಪರವಾಯಿಲ್ಲ ಚೆನ್ನಾಗಿದ್ದಾರೆ ಒಂದು ಜೋಡಿ ಪಾರಿವಾಳ ಇದ್ದಂತೆ' ಎಂದು ಬಿಡುವಿರಿ ನೀವು. ಹೌದು ಅವರು ಪಾರಿವಾಳಗಳೂ ಸರಿ, ಶುಕ ದಂಪತಿಗಳೂ ಸರಿ!

ಲೀಲಾ ಬರಹಗಾರ್ತಿ-ಚೆನ್ನಾಗಿ ಎಂದರೆ ಚೆನ್ನಾಗಿಯೇ ಸರಿ. ಕಾಲೇಜಿಗೆ ಏರಿದ ಮೇಲೆ ಉಪ್ಪಿನ ಸತ್ಯಾಗ್ರಹಕ್ಕೆ ಸೇರಿಕೊಂಡು ಬಿರುದು ಪಡೆದವಳು. ಅವರ ಮದುವೆ ಮತ್ತು ಗೃಹಜೀವನ ನೋಹದ ವಾಹಿನಿ ಯಾದ್ದರಿಂದ, ರಂಗರಾಜ ಎಂದೆಂದೂ ಅವಳ ಒಳ ಆಡಳಿತಗಳ ವಿಚಾರ ವನ್ನೇ ಸಂಸಾರದಲ್ಲಿ ವಿಚಾರಿಸಿರಲಿಲ್ಲ. ಅವಳು ವೀಚಿ ಎಂಬ ಹೆಸರಲ್ಲಿ ಪ್ರಬಂಧಗಳನ್ನೂ ಬರೆಯುತ್ತಿದ್ದಳು. ಹಿಂದಿಯಲ್ಲೇ ಸದಾ ಬರೆದು ಕಳಿಸಿ ಬಿಡುವ ಸ್ವಭಾವ. ಅವಳ ದಳದ ಸ್ನೇಹಿತರು ಅವನ್ನು ಕನ್ನಡ, ಹಿಂದಿ ಮತ್ತು ಇಂಗ್ಲೀಷಿನ ಅಂಕಗಳಲ್ಲಿ ಪ್ರಕಟಿಸುತ್ತಿದ್ದರು. ಅವಳು ಲೇಖನಿ ವ್ಯವಸಾಯದಿಂದ ಬಟ್ಟೆ ಬರೆ ವೆಚ್ಚವೆಲ್ಲ ಸಂಸಾರದಲ್ಲಿ ಜರುಗಿಸುತ್ತಿದ್ದಳು. ಹೆಚ್ಚು ಖರೀದಿಯ ಖಾದಿಯೆಲ್ಲ ಇವಳು ಕೊಂಡು ತರುವಳು. ಅವಕ್ಕೆ ತನ್ನ ಬರಹದ ಶಿರೋನಾಮುವನ್ನೇ ಇಟ್ಟು ಬಿಡುವಳು. ಮನೆಯಲ್ಲಿನ ಬೆಳ್ಳಿ ಬಂಗಾರ ಕುರ್ಚಿ ಮೇಲೆ ದಿಂಬುಧಾವಳಿಗೆಲ್ಲ ಈ ರೀತಿಯಾಗಿ ತುಂಬಿದ ಬೊಗಸೆ, ಹೊನ್ನಿನ ಈಟಿ, ರಾಗ ಸಂಪಿಗೆ, ಸದಾ ಮಿನುಗಿ-ಮುಂತಾ ದವೇ ಅಂಥಾ ಹೆಸರುಗಳು. ಅಂಬರದಲ್ಲಿ ಪ್ರಕಟವಾದ ಕಥೆಗಳ ಹೆಸರನ್ನೇ ಇಡುವುದೇಕೆಂದು ಸಂಶಯದಿಂದ ಒಂದು ಸಾರಿ ರಂಗರಾಜ ಕೇಳಿಬಿಟ್ಟ. ಆಗ ಲೀಲಾ ಹೀಗೆ ಅಡ್ಡ ಮಾತೆತ್ತಿದಳು.—ನನ್ನ ಗೂಡಿನಲ್ಲಿ ನಾನು, ನನಗೆ ನನ್ನ ಗಂಡನಿಗೆ, ಅಯ್ಯೋ ಅಯ್ಯೋ, ನನ್ನ ಪತಿದೇವನಿಗೆ ಅಥವ ನನಗೆ ಒಪ್ಪಿಗೆಯಾದ ಹೆಸರನ್ನೇ ಇಡುತ್ತೇನೆ. ರಾಗ ಸಂಪಿಗೆ ರಗ್ಗು

ಇಟಲಿ ಕಂಬಳಿಗಿಂತ ಚೆನ್ನಾಗಿದೆ ಅಂತ ನೀವೇ ಎಂದಿರಿ. ಹೊನ್ನೀಟಿ ಪೆನ್ನು ಪದ್ಯಕ್ಕೂ ಪ್ರಗತಿ ಲೇಖನಕ್ಕೂ ಚೆನ್ನಾಗಿ ಓಡುತ್ತೇಂತಾಯಿತು. ತುಂಬಿದ ಬೊಗಸೆಯ ಬೆಳ್ಳೀ ತಟ್ಟೆಯಲ್ಲೇ ಊಟ ಮಾಡಬೇಕೆಂತ ಹಟ ಹಿಡಿದು ದೇವರಿಗೆ ಅಣಿ ಮಾಡಿಟ್ಟ ಪೂಜೆ ಸಾಮಾನೆಲ್ಲ ಕೆಳಗಿರಿಸಿದಿರಿ ಆ ಗೌರಿ ಹಬ್ಬದಲ್ಲಿ. ನಾನು ಆಗಿನಿಂದ, ಕಲ್ಲನಾಗರ ಪೂಜೆಗಿಂತ, ಜೀವದ ನಾಗರ ಪೂಜೆಯೇ ಲೇಸೆಂತ ಸುಮ್ಮನಾದೆ. ನಾಳೆ ಹೋಗಿ ಬೋಗಿ ಭವನದ ಹೋಟಲಲ್ಲಿ ಕೇಳಿನೋಡಿ. ಈ ಹಲ್ವಾ ಹೇಗಪ್ಪ ಮಾಡಿದೆ ಎಂತ. 'ನಿಮಗೆ ರುಚಿಯಾಗಿದ್ದರೆ ಸರಿ ಬುದ್ದಿ, ನಾವು ಅದನ್ನ ಲೂಟೀ ನದಿ ಜೊಂಡಿನಿಂದ ಮಾಡಿದ್ದೇವ್ತೆ।ಅಥವಾ ಗಂಗಾನದಿ ನೊರೆಯಿಂದ ನಾಳೆ ಮಾಡುತ್ತೇವೆ. ನಿಮಗೇಕೆ ಬುದ್ಧಿ, ಚೆನ್ನಾಗಿದ್ದರೆ ತಿಂದು ಹೋಗಿ' ಎನ್ನುವುದಿಲ್ಲವೇ? ಹಾಗೇ।ಭಾವಣಿ ಇರಲಿ, ಇಲ್ಲದಿರಲಿ, ಇದೊಂದು ಗೂಡು! ಸುಚ್ಚು ಇರಲಿ, ಇಲ್ಲದಿರಲಿ, ನೀವು ಕುಡಿಯುವ ಬಟ್ಟಲಲ್ಲಿ ಇದೊಂದಿಷ್ಟು ಗಂಜಿ. ಆದರೆ ದಿನಾದಿನಾ ನೀವು ಬಿಟ್ಟೆ ಬರೆದು ಬರೆದು ನನ್ನ ಅಳಲೆ ಕಾಯಿ ಮಸಿಯೆಲ್ಲ ಕಾವ್ಯೈಯ್ಯ ಭೀವ್ಯೈಯ್ಯಗಳ ಪತ್ರಿಕೆಗಳಿಗೇ ಸಾಲದಾಗಿ ಹೋಯಿತು. ನನ್ನ ರಸಗವಳದ ಶಕ್ತಿ ನಿಮ್ಮ ಮೈ ಹೊಕ್ಕು ಆ ಗಾಳಪ್ಪನ ಗಿರಣಿಗಷ್ಟು, ಈ ಪಾಶಪ್ಪನ ಪತ್ರಿಕೆಗಿಷ್ಟು ಎಂತ ವೆಚ್ಚವಾದರೆ ಈ ಪಾಪಿಯಾದ ನಾನು ಕುಡಿಯೋದಾದೀತೇ, ಕುಡಿಯೋಕೆ ಸಿಕ್ಕೀತೆ, ಈ ಜೇನು, ಈ ಜೇನು— ಎಂದು ಓಡಿಬಂದು ಕಾಗದ ಕಿತ್ತು ಬಿಸಾಟು ಅವನ ಹತ್ತಿರ ಸರಿದು ಕುಳಿತು ಬಿಟ್ಟಳು. ಮತ್ತೆ ತಬ್ಬಿಕೊಂಡು 'ಏನೊಂದರೆ, ಇಷ್ಟು ಸೊಗಸಾದ ಮುಖ, ಈ ತುಟಿ, ಈ ಕಣ್ಣು, ಇವೆಲ್ಲ ನೋಡುವುದಕ್ಕೂ ಅವಕಾಶ ಕೊಡದೆ ಬಾಗಿಲು ಬಡಚಿಕೊಂಡು ಕೂತುಬಿಡುತೀರಲ್ಲ. ಇದು ಥರವೆ, ನನ್ನದೇವರೆ, ನನ್ನ ಹೂವೆ, ನೀನು ಖಂಡಿತ ಹೀಗೆ ಮಾಡಬಾರದು. ನನ್ನ ಮನೆ ಬೆಳಕು ಮಾಡಿ, ನನ್ನ ಕರೀಮಣಿಸರ, ಎಳೆಯುವಂಥ ಒಂದು ಕೂಸು ಅವತಾರವಾಗುವವರೆವಿಗೆ ನನ್ನ ಒಬ್ಬಳನ್ನೇ ಬಿಟ್ಟು ಕೂರಬೇಡ ನನ್ನ ದೊರೆ, ನನ್ನ ರಾಜಾ' ಎಂತ ಹೇಳಿಕೊಳ್ಳುತ್ತಿದ್ದಾಗ್ಗ, ರಂಗರಾಜ ಕೇಳಿದ-'ಹಾಗಿದ್ದರೆ ಹೇಳಿಬಿಡು, ನಿನ್ನ ಅಂಬರ ಸಾಹಿತ್ಯದ ಗುಟ್ಟೆಲ್ಲ. ಅಲ್ಲದೆ ಹಗಲು ಹೊತ್ತು ನಿಮ್ಮನ್ನ ಮುಟ್ಟುವುದಿಲ್ಲ. ಹಗಲು ವಿರಾಮದ

ಗಂಟೆಗಳೆಲ್ಲ ಕನ್ನಡ ದೇವಿಗೆ ಮೀಸಲು ಎಂತ ನೀನೇ ಮಾತು ಕೊಟ್ಟಿದ್ದಿ. ಈಗ ಆ ಮಾತು ಒಡೆದು ಮುತ್ತೂ ಕೊಡಬಂದರೆ, ನಾನು ನಿನಗೆ ದಕ್ಕುವೆನೆ ?' ಎಂದು ಹೇಳುತ್ತ ಥಟಾರನೆ ಎದ್ದು ಓಡಿಹೋಗಿಬಿಟ್ಟ. ಲೀಲಾ ಬೇಸರಪಟ್ಟಳೋ ಏನೋ, ಅಂತು ಅಲ್ಲೇ ಉರುಡಿಕೊಂಡು ಬಹಳ ಹೊತ್ತು ಮಲಗಿದ್ದಳು. ನೆಲದ ಮೇಲೆ ಕಣ್ಣೀರು ಹನಿಯುತ್ತಿದ್ದ ಹಾಗೇ ಲೀಲಾವತಿಗೆ ನಿದ್ದೆಯ ಝೋಂಪು. ಅದರಲ್ಲಿ ಕನಸು. ಆ ಹೊಂಗನಸಿನಲ್ಲಿ ಕಾರವಾದ ಅದೇ ಗುಹೆ, ಮೊದಲೊಲುಮೆಯ ಮೂಲ !'

ಅಂದಿನ ಅಂಚೆಯಲ್ಲಿ ಅಂಬರ ಪತ್ರಿಕೆಯ ಹೊಸ ಸಂಚಿಕೆಯೂ ಬಂತು. ಅದರಲ್ಲಿತ್ತು ಒಂದು ಪ್ರೇಮ ಕಾಹಿನಿ-"ದಂಡೀ" ಎಂದು ಅದರ ಶಿರೋನಾಮೆ. ಆ ಕಥೆಯಿಂದ ಲೀಲಾ ರಂಗರಾಜರ ಪ್ರೇಮ ಜೀವನವು ಸ್ವಲ್ಪ ವಿವರವಾಗಿ ವ್ಯಕ್ತವಾಗಿತ್ತು. ಇವರೀರ್ವರೂ ಅದರ ವಿಚಾರವಾಗಿ ಮಾತಾಡುತ್ತಿದ್ದಾಗ್ಗೆ, ಲೀಲಾ ಒಂದು ಹಳೆಯ ಕಾಗದ ಮತ್ತು ಕರವಸ್ತ್ರ ಒಳಗಿನಿಂದ ತಂದಳು. ಅದರಲ್ಲಿ ಅವಳು ಹಿಂದೊಮ್ಮೆ ಕಸೂತಿ ಹೊಲೆದಿದ್ದಳು. ಅದು ಹೀಗಿತ್ತು—'ಹೆಣ್ಣು ಕೊಡುತ್ತೇನೆ, ಹಣ್ಣು ಕೊಡುತ್ತೇನೆ' ನಿನ್ನ ಜೀವನಕೊಂದು ಕಣ್ಣು ಕೊಡುತೇನೆ, ತಮ್ಮಯ್ಯಾ ಬಾ ನಿನ್ನ ದಮ್ಮಯ್ಯಾ" ಅದನ್ನ ಲೀಲಾ ರಾಗವಾಗಿ ಅಭಿನಯ ಪೂರ್ವಕವಾಗಿ ಓದಿದಳು. ಆ ದಿನವೇ ಗಂಡಹೆಂಡಿರು ಆ ಮನೆಯಲ್ಲಿ ಸಾವಧಾನವಾಗಿ ಕೂತು ಹಿಂದಿನ ವಿಷಯಗಳನ್ನೆಲ್ಲ ತೋಡಿಕೊಂಡು ಪರಸ್ಪರ ಹಲವಾರು ವಿಚಾರಗಳನ್ನು ಅರಿತುಕೊಂಡರು. ಅದುವರಿಗೆ ರಂಗರಾಜನಿಗೆ ಆ ಸಂಸಾರದ ಅಥವ ಆಕೆಯ ಸಾಹಿತ್ಯದ ಆಗು ಹೋಗು ತಿಳಿದಿರಲಿಲ್ಲ.

ಲೀಲಾ ಯಾವ ಜಾತಿ ಯಾವ ಕುಲವೆಂದು ಅವಳಿಗೇ ಖಚಿತವಾಗಿ ಅರಿಯದು. ಅದನ್ನೆಲ್ಲ ತಿಳಿದುಕೊಳ್ಳಲು ಆಕೆಯು ಪ್ರಯತ್ನಪಟ್ಟಿರಲಿಲ್ಲ. ತಾನು ಭಾರತೀಯಳೆಂಬುದೊಂದೇ ಅವಳಿಗೆ ಸಾಕಾಗಿತ್ತು ಅವಳ ತಾಯಿ ಸಿದ್ದಾಪುರದಲ್ಲಿ ಒಂದು ಹೋಟಲು ಇಟ್ಟುಕೊಂಡಿದ್ದಳು. ಆಕೆ ವಿಧವೆ. ಸಕೇಶಿಯಾಗಿದ್ದಳೆಂದು ಯಾರೂ ನೆಂಟರು ಅವರ ಮನೆಗೆ ಹೋಗಿ ಬರುತ್ತಿರಲಿಲ್ಲ. ಆದ್ದರಿಂದ ಮೈಸೂರು ಬಿಟ್ಟು ಸಿದ್ದಾಪುರಕ್ಕೆ ಕಾವಲಿ ಮುಗಚಿಕಾಯಿ ಮಾತ್ರ ಕೈಲಿ ಹಿಡಿದು ಎರಡು ವರ್ಷದ ಲೀಲಾವತಿಯನ್ನು ಕೊಂಕುಳಲ್ಲಿ

ಇರಿಸಿಕೊಂಡು ಹೊರಟು ಬಂದಿದ್ದಳು. ಹೇಗೋ ಕಲ್ಲೆದೆ ಮಾಡಿಕೊಂಡು ಯಾರು ಯಾರೆಲ್ಲರ ಆಶ್ರಯಬೇಡಿ ಜಗುಲಿಯೊಂದರ ಮೇಲೆ ಒಲೆಹೂಡಿ, ಪುಟ್ಟ ಹೋಟಲನ್ನೇ ದೊಡ್ಡದು ಮಾಡಿಕೊಂಡಿದ್ದಳು. ನಾಕಾರು ಮಕ್ಕಳಿಲ್ಲ ನಾಕಕ್ಕೇರಿ ಉಳಿದೊಬ್ಬಳು ಲೀಲಾ ಸಿದ್ದಾಪುರದಲ್ಲಿ ಹದಿನಾರರಲ್ಲಿ ಕಾಲಿಡುವಾಗ್ಗೆ ಆ ತಾಯಿಗೆ ವಯಸ್ಸು ಅರುವತ್ತಕ್ಕೆ ಏರಿತ್ತು. ಆದರೂ ಆ ಖಾನಾವಳಿಯಲ್ಲಿ ಅಡುಗೆ ಕೆಲಸವೆಲ್ಲ ತಾನೇ ಮಾಡುತ್ತಿದ್ದಳು. ತನ್ನ ಮಗಳಿಗೆ ಸಾಕಾದಷ್ಟು ವಿದ್ಯಾಶಿಕ್ಷಣವನ್ನು ಕೊಡಿಸಿದ್ದಳು. ಅವಳಾದರೂ ಅನುಭವಿಸಲೆಂದು ಸರ್ವ ಸ್ವಾತಂತ್ರ್ಯವನ್ನು ಕೊಟ್ಟಿದ್ದಳು. ದಂಡೀ ಯಾತ್ರೆಯನ್ನು ಶ್ರೀ ಮಹಾತ್ಮಾಜಿ ಆರಂಭಿಸಿದಾಗ್ಗೆ ತಾನೂ ಸೇರಬೇಕೆಂದು ಲೀಲಾ ಹಟ ಹಿಡಿದಾಗ ಮುದುಕಿ ತಾಯಿಯ ಶಕ್ತಿ ಕುಗ್ಗಿತ್ತು. ಕೆಲಸಕ್ಕಾಗಿ ಆ ಊಟದ ಮನೆಯಲ್ಲಿ ಅನೇಕರನ್ನು ಇಟ್ಟುಕೊಂಡು ದಿನಗಟ್ಟಲೆ ನೂರಾರು ರೂಪಾಯಿಗಳನ್ನು ಎಣಿಸಿದ್ದಳು. ಇವೊಬ್ಬಳು ಮಗಳು ಮನೆಬಿಟ್ಟಿದ್ದರಿಂದ ವೃದ್ಧಮಾತೆಗೆ ನರಬಲವೇ ಹೋದಂತಾಯಿತು. ಹಲವು ಜನ ಬಂದು ಹೋದರೂ ಮಗಳಿಲ್ಲವೆಂಬ ಚಿಂತೆ ಹೆಚ್ಚಾಗಿತ್ತು.

ದಂಡಿಯ ಬಳಿಗೆ ಸೇರಲು ಮುನ್ನ ಅನೇಕ ಲಾಠಿ ಗೊಂದಲಗಳಲ್ಲಿ ಸಿಕ್ಕಿಕೊಂಡು ಲೀಲಾ ಏಟು ತಿಂದಿದ್ದಳು. ಎದೆಯ ಮೇಲೆ ಬಿದ್ದ ಒಂದು ಏಟು ಬಹಳ ತೀವ್ರವಾಗಿತ್ತು. ಮತ್ತು ಹಣೆಯ ಮೇಲಿನದು ಅಷ್ಟೇನು ತೀವ್ರವಲ್ಲದಿದ್ದರೂ ಒಂದು ಗಾಯದ ಗುರುತನ್ನು ತಿಲುಕದ ಮಾದರಿಯಲ್ಲಿ ಇಟ್ಟು ಮಾದಿತ್ತು. ಇನ್ನೂ ಮುನ್ನೂ ಕೆರೆದ ಕೂಡಲೆ ಅದರಿಂದ ರಕ್ತ ಹಸಿಯುವಂತಿತ್ತು. ಅವೆರಡು ಗುರುತುಗಳನ್ನು ಲೀಲಾ ಗುಪ್ತವಾಗಿಟ್ಟಿದ್ದಳು. ಯಾರಿಗೂ ತೋರಿಸಿರಲಿಲ್ಲ. ಈ ದಿನ ರಂಗರಾಜನಿಗೆ ಆ ಕಾದಾಟದ ಕುರುಹುಗಳನ್ನು ತೋರಿಸಿದಳು. "ನನ್ನ ತಾಯಿ ಕೂಡ ನೋಡಿಲ್ಲ ಈ ಗಾಯದ ಮತ್ತು ಈ ಮಾಯದ ಗುರುತು. ಎದೆಯ ಮೇಲಿನ ಗುರುತು ಹಾಗಿರಲಿ ಹಣೆಯ ಮೇಲಿನ ಗುರುತನ್ನೂ ನನ್ನ ತಾಯಿ ಕಾಣಳು. ಎಂದೂ ಕುಂಕುಮ ಇಡದವಳು ಈ ದಂಡಿಯಾತ್ರೆಯಾದ ನಂತರ ದೊಡ್ಡದಾಗಿ ಇಡುತ್ತಿದ್ದೇನೆ ಈ ಕನ್ನಡ ತಿಲುಕ. ನೀನಾದರೂ ದೂರದಲ್ಲಿ ನಿಂತು ನೋಡು, ಅಯ್ಯೋ ಕ್ಷಮಿಸಿರಿ, ದೂರದಲ್ಲಿ ನಿಂತು ನೋಡಿರಿ. ಏಕೆಂದರೆ

ಈ ಗಾಯದ ಗುರುತುಗಳೆರಡೂ ನನಗೂ ಮನಸ್ಸು ಕೆರಳಿಸುತ್ತವೆ. ನನಗೂ ಅವು ಕಾಣಿಸುವುದಿಲ್ಲ. ಕನ್ನಡಿಯಲ್ಲೇ ನೋಡಿಕೊಳ್ಳಬೇಕು. ಹಾಗೆ ನೋಡಿಕೊಂಡಾಗ ವೈನವಿರೆದ್ದು ರಕ್ತ ಕುದಿಯಲಾರಂಭಿಸುತ್ತದೆ. ನೀವು ಹತ್ತಿರ ಬಾರದಿರಿ ದೂರದಲ್ಲಿ ನಿಂತುನೋಡಿ. ಒಂದೊಂದು ಬಾರಿ ದ್ರೌಪದಿಯ ಆವೇಶ ಬಂದು ತಲೆಕೂದಲು ಕೆದರಿ ಮುಖಕ್ಕೆ ಆವೇಶ ಬಂದು....
....ಹೋಗಲಿಬಿಡಿ ಅವೆಲ್ಲ ಈಗೇಕೆ!" ಹೀಗೆಂದು ಹೇಳಿ ಒಳಗೆ ಹೋದಳು. ಆಗ ಮತ್ತೆ ಮಿಂದು ನಿಂದು, ಬಿಳಿಯುಡಿಗೆಯುಟ್ಟು ನಿಡುಗೇಸಿಯಾಗಿ ನಿಂತು, ರಂಗರಾಜನಿಗೆ ದಂಡಿಯಾತ್ರೆಯ ಆ ಕಲೆಗಳನ್ನು ಪ್ರೇಮದಿಂದ ತೋರಿಸಿ ತನ್ನ ಕೆಲಸದಲ್ಲಿ ನಿರತಳಾದಳು.

ಅದೆಲ್ಲ ನೋಡಿದ ರಂಗರಾಜನಿಗೆ, ಪವಿತ್ರವಾದ ದಂಡಿಯ ದೃಶ್ಯವೆಲ್ಲ ಕಣ್ಣಿಗೆ ಕಟ್ಟಿತು. ಕೋಲೂರಿಕೊಂಡು,ದೊಡ್ಡ ಕುಂಕುಮದ ಬೊಟ್ಟಿಟ್ಟು ಸ್ವಲ್ಪ ನಡುಬಾಗಿ ಹೊರಟಿದ್ದ ಮಹಾತ್ಮಾಜೀ; ಅವರ ಬಳಿ ಕಸ್ತೂರಿ ಬಾ, ಮುಪ್ಪಿನ ಮುತ್ತೈದೆ! ಶ್ರೀ ಗಾಂಧೀಜೀಯವರ ನಡುವಿನಲ್ಲಿ ಪುಟ್ಟ ಗಡಿಯಾರ, ಮುಖದಲ್ಲಿ ಅಪೂರ್ವ ನಗುವಿನ ತೇಜಸ್ಸು. ಹಿಂದೆ ಜನ, ಮುಂದೆ ಬಾಂಡ್ಲೆ ಸೌಟು ಹಿಡಿದು ಹೊರಟವರು, ಕೊಳಲೂದಿ ಕಿನ್ನರಿ ಬಾರಿಸಿ ತಾಳ ಹೊಡೆದುಕೊಂಡು ಭಜನೆ ಮಾಡುವವರೆಲ್ಲರೂ ಮುಂದೆ ಹಿಂದೆ ಇದ್ದಾರೆ. ರಂಗರಾಜನ ಕಣ್ಣಿಗೆ ಆ ಚಿತ್ರ ನಿಚ್ಚಳ ನಿಜವಾಗಿ ಕಾಣಿಸಿತು. ಅಳಿಸಿದ ಅಮೃತ ಯಾತ್ರೆಯದು. ಅಶ್ಚರ್ಯವಿನ್ನೇನೆಂದರೆ ಆ ಸತ್ಯಾಗ್ರಹದ ಮೆರವಣಿಗೆಯಲ್ಲಿ ತಾನೂ ಮತ್ತು ಲೀಲಾವತಿ ಸಹ ಇದ್ದಹಾಗಿತ್ತು. ಆ ಲವಣಾಸುರ ನಿಗ್ರಹವು ಮುಗಿದ ನಂತರದ ನೆನಪು ಬಂತು. ಲೀಲಾ ಅಂದು ವೀರಕನ್ಯೆ. ಅವಳು ಆಗ ದೇಶಕ್ಕಾಗಿ ತನ್ನ ದೇಹವನ್ನೇ ಅರ್ಪಿಸಿ ಶಿಲುಬೆಯೇರಿದ ಕ್ರಿಸ್ತ ಶಿಷ್ಯರ ಮಾದರಿಯಲ್ಲಿ ಪವಿತ್ರದೇಹಿಯಾಗಿದ್ದಳು. ಜಾತಿ, ಕುಲಗಳನ್ನು ಮೀರಿ ಭಾರತ ಕನ್ಯಾಮಣಿಯಾಗಿದ್ದಳು. ವಿದ್ಯಾವಿನಯಸಂಪನ್ನಳಾದವಳು. ಯಾವ ವೀರನಿಗಾದರೂ ಪತ್ನಿಯಾಗಿ ವೀರ ಪುತ್ರನಿಗಾದರೂ ಮಮತೆಯ ಮಾತೆಯಾಗಲು ಸಿದ್ಧಳಾದವಳು. ಹೀಗೆ ಯೋಚಿಸುತ್ತಿದ್ದಾಗ, ಲೀಲಾವತಿ ಒಮ್ಮೆ ಒಳಗೆ ಹೋಗಿ ತನ್ನ ಅಡುಗೆ ಮನೆ ಕೆಲಸವೊಂದಿಷ್ಟು ಮುಗಿಸಿ ಕೊಂಡುಬಂದು—"ಇದೇನು ಗಿರಣಿ ಮಾಲೀಕರೆ,

ನಿಮ್ಮನ್ನೇ ನೀವು ಮರೆತುಕೊಂಡಿರಾ, ಎಚ್ಚರವಾಗಿ—ಜಾಗೋ ಜಾಗೋ, ಉತ್ತಿಷ್ಠ, ಜಾಗ್ರತ, ಪ್ರಾಪ್ಯವರಾನ್ನಿಬೋಧತ!" ಹೀಗೆಂದು ಹೇಳಿ ಕಾಲು ಮಣೆಯಮೇಲೆ ನಾಲ್ಕು ಬಗೆ ತಿಂಡಿಗಳನ್ನು ತಂದಿಟ್ಟಳು.

ತಿಂಡಿ ತಿನ್ನುತ ರಂಗರಾಜನು ಪುನಹಾ ಹಿಂದಿನ ಮಾತೆತ್ತಿ ಕೇಳಿದನು —"ಹಾಗಾದರೆ ಆ ಕಪಿಲಾ ಪತ್ರಿಕೆಯಾತನಿಗೆ ಏನು ಹೇಳೋಣ? ಏನಾದರೂ ಬರೆಯಬೇಕಲ್ಲವೆ? ನಿನ್ನ ಮಾತಿಗೆ ಕಟ್ಟುಬೀಳುತ್ತ ಹೇಗೆ ನಿತ್ಯ ಜೀವನ ನಾಗುತ್ತದೆಯೋ ಹಾಗೇ ಸಾಹಿತ್ಯ ಜೀವನದಲ್ಲಿ ಪತ್ರಿಕೆಯವರ ಮಾತಿಗೆ ಕಟ್ಟು ಬೀಳಬೇಕಾಗಿವೆ, ಬಾಳಬೇಕಾದರೆ. ಇಲ್ಲದಿದ್ದರೆ ಕನ್ನಡ ಕುಲದಲ್ಲಿ ನನಗೆ ಸ್ಥಾನವೇನಿದೆ?"

ಲೀಲಾವತಿಯು ಇದುವರೆಗೆ ರಂಗರಾಜನ ಹಲಕೆಲವು ಕೃತಿಗಳನ್ನು ಮೂಲಸಮೇತ ಕದ್ದು ಹಿಂದಿಯಲ್ಲಿ ಸಾಧಿಸಿ ಇಂಗ್ಲೀಷಿನಲ್ಲಿ ಅನುವಾದಿಸಿದ್ದಳು. ಈತನಿಗೆ ಮಾತ್ರ ಅದಾವುದೂ ಗೊತ್ತಿಲ್ಲ. ವೀಚೀ ಎಂಬುವರಾರೋ ಅಪರಿಚಯಸ್ಥರೆಂದೂ, ಅವರಂತೆ ತಾನೂ ಭಾವಿಸಿ ಬರೆದುದು ಅತ್ಯಾಶ್ಚರ್ಯಕರವೆಂದೂ ರಂಗರಾಜನು ಭಾವಿಸಿದ್ದನು ಲೀಲಾವತಿ ಪ್ರಸಂಗತ್ವೇನ ಹೇಳಿದಳು—"ಯಾವುದಾದರೂ ಪ್ರೇಮ ಕಾಹಿನಿ ಬರೆಯಿರಲ್ಲ! ಅತ್ಯಂತ ಹಳೆಯದು ಮೈತ್ರೇಯಿ ಕತೆ. ಸೀತಾ ಕತೆ ಚೆನ್ನಾಗಿಲ್ಲವೆ? ರಜಪೂತ ಸತಿಯರ ಕತೆಗಳಿವೆಯಲ್ಲ! ಅವು ನಿಮ್ಮದೇ ಆಗಬೇಕಾದರೆ, ಮೊದಲಿನ ಆ ಹೆಸರುಗಳನ್ನು ಕಿತ್ತೊಗೆದು ಸಂದರ್ಭಸನ್ನಿವೇಶಗಳನ್ನು ಸಿನಿಮಾ ತಾರೆಗಳಿಗೆ ಹೊಂದಿಸಿಕೊಳ್ಳಿ, ಅಗೋ ಕೊಕ್ಕೋ ಎನ್ನುವುದರಲ್ಲೇ ಅದೊಂದು ನಿಮ್ಮ ಕತೆಯೆನ್ನಿಸಿ ವಿರಾಜಿಸುತ್ತದೆ ಆ ನಿಮ್ಮ ಗೆಳೆಯರ ಕಪಿಲಾ ಪತ್ರಿಕೆಯಲ್ಲಿ!"

ರಂಗರಾಜನು ದೀರ್ಘವಾಗಿ ಆಲೋಚಿಸಿದನು. ಎಲ್ಲಾ ದೇಶಗಳ ಕತೆಗಳನ್ನೂ ನೆನಪಿಗೆ ತಂದುಕೊಂಡನು. ದೀಪ ಶಿಖೆಗೆ ಪತಂಗ ಮುತ್ತುಕೊಟ್ಟಂತೇ ಅವರೆಲ್ಲರ ಪ್ರೇಮಜೀವನ. ದೀಪವೂ ಆರಿ ಪತಂಗದ ರೆಕ್ಕೆಯೂ ಸೀದುಹೋಗುತ್ತದೆ. ಹೂವಿಗೆರಗುವ ಚಿಟ್ಟೆಯಾದರೂ ಇನ್ನೇನು? ಪೂರ ಸವೀಂಟುವ ಸಮಯದಲ್ಲಿ ಜೇಡರಹುಳು ಬಂದು ಮೃತ್ಯು ಬಂಧನದಲ್ಲಿ ಬಿಗಿದು ಹಿಡಿಯದಿದ್ದರೆ ರಸವನ್ನು ಪೂರ್ತಿ ಸವಿದು ಮರುಕ್ಷಣ ಅದೇ ಅಳಿಯು

ತ್ತದೆ. ಇದರಲ್ಲಿಲ್ಲ ಪ್ರೇಮಿಕಾ ಪ್ರೇಮಿಕೆಯರ ಆತ್ಮಾರ್ಪಣವೇ ಮುಖ್ಯ! ಈ ಹೆಣ್ಣು, ಈ ಲೀಲಾ ಹೇಗಿದ್ದವಳು, ಹೇಗೆ ವರ್ತಿಸಿದವಳು, ಈಗ ಹೇಗಿದ್ದಾಳೆ! ಫ್ರಾನ್ಸು ದೇಶದ ಜೋನಳಂತೆ ತನ್ನ ರಾಜ್ಯದ ಸ್ವಾತಂತ್ರ ಸಾಧನೆಗಾಗಿ ಹೊರಟ ಮಹಾ ವೀರಾಗ್ರಣಿ! ಇವಳ ಆತ್ಮಾರ್ಪಣ ಚಿತ್ರವನ್ನೇ ಅಕ್ಷರಪಟದಲ್ಲಿ ನೇಯ್ದುಬಿಡೋಣವೆಂದು ಹತ್ತಿರ ಸರಿದು ಅವಳ ಕೈ ಹಿಡಿದುಕೊಂಡು ಏನೋ ಕೇಳುವುದರಲ್ಲಿದ್ದನು. ಆಗ ಲೀಲಾ ಹೇಳಿದಳು :—

"ಸಾಗಲಿ ಆಟ, ಈ ಕೈ ಹಿಡಿದುಕೊಂಡು ಆ ಕಣ್ಣಿಗೆ ಒತ್ತಿಕೊಳ್ಳುವಿರೋ? ಏನು ಹುಚ್ಚು ಇದು? ನೀವು ನನ್ನ ಮರೆತರೆ ಒಳ್ಳೇ ಕಾಹಿಸಿ ಬರೆದೀರಿ. ಈಗಿನ ಕೆಲವು ಚಿತ್ರಕಾರರು ಮಾಡುವಂತೆ ಮಾತ್ರ ನೀವು ಮಾಡಬೇಡಿ. ಈಗಿನವರು ಸರಸ್ವತಿ, ಲಕ್ಷ್ಮೀ, ರಾಧಾ, ಭಾರತಮಾತೆ ಮೊದಲಾಗಿ ಏನು ಚಿತ್ರ ಬಿಡಿಸಿದರೂ ತಮ್ಮ ಅಕ್ಕ ತಂಗೀರ ಅಥವಾ ಹೆಂಡಿರ ಮೋರೆಗಳನ್ನೇ ಇಳಿಸಿಬಿಡುತ್ತಾರೆ. ನೀವು ಮಾತ್ರ ನನ್ನ ಹೆಸರ ಬಳಿ ನಿಮ್ಮ ಸಾಹಿತ್ಯವನ್ನು ಸುಳಿಯಿಸಬಾರದು."

ರಂಗರಾಜ—"ನಿನ್ನ ಪ್ರೇಮ ಕಾಹಿಸಿಯನ್ನೇ ಬರೆದರೆ ಏನು ಮಾಡುತ್ತಿ? ಹಸ್ತ ಪ್ರತಿಯನ್ನೇ ಕದಿಯುತ್ತೀಯಾ, ಹರಿಯುತ್ತೀಯಾ, ಭಾಷಾಂತರ ಮಾಡುತ್ತೀಯಾ, ರೇಗಿ ರೇಗಿ ನನ್ನನ್ನೇ ಕಬಳಿಸಿ ಬಿಡುತ್ತೀಯಾ!'

ಲೀಲಾ—"ಎಲ್ಲಾ ಮಾಡಿಬಿಡುತ್ತೇನೆ...... ಥೂ ನನ್ನ ಗತಿಗೆ! ನಿಮ್ಮ ಸಂಗಡ ನಾನು ಅದೆಂದು ಸೇರಿದೆನೋ ಅಂದೇ ನೀವು ಹಾಳಾದಿರಿ! ನನ್ನ ವಿಚಾರ ಬೇಡಾಂದರೆ! ನೀವು ಹೇಳಿದ ಹಾಗೆ ಕೇಳುತ್ತೇನೆ. ನನ್ನ ಹೆಸರು ಮಾತ್ರ ಎತ್ತಬೇಡಿ, ನನ್ನ ಗೋಜಿಗೆ ಬರಬೇಡಿ!"

ರಂಗರಾಜ—"ಆ ದಿನದ ಸನ್ನಿವೇಶವೊಂದೇ ಸಾಕು. ಮೊದಲು ಸತ್ಯಾಗ್ರಹದ ಗುಂಪಿನಲ್ಲಿ ಚಿತ್ರಾಂಗದೆಯಾಗಿದ್ದವಳು ಆ ದಿನ ಆ ಮುಂಬೆಳಗಿನಲ್ಲಿ, ಸಮುದ್ರನೊರೆಯು ಅಲೆಗಳ ಮೇಲೆ ಹಾರಿ ಹಾರಿ ಎರಚುತ್ತಿದ್ದ ಆ ಕಾರವಾರದ ಸಾಗರತೀರದ ಗುಹೆಯ ಮುಂಬಾಗಿಲಲ್ಲಿ........"

ಲೀಲಾ—"ಹೌದು ಮುಂಬಾಗಿಲೇ ಅದು. ಅದನ್ನಾರೋ ದೀಪ ದಂಡಿ ಯುಗದವರು ಕೆತ್ತಿರಬೇಕು. ಆಗ ಭಾರಿ ಅಲೆ ಬಂತಲ್ಲವೆ! ನಮ್ಮ ದೋಣಿ ತಪ್ಪಿಸಿಕೊಂಡು ಹೋಗಿತ್ತಲ್ಲವೆ? ನೀವೇ ಹಿಡಿದು ತಂದು ಅದನ್ನು ಗುಹೆಯ ಬಾಗಿಲಿಗೆ ಕಟ್ಟಿದಿರಿ. ಆಗ ನಿಮ್ಮ ಕೂದಲು ಮೇಲಿನ ನೊರೆ ಹಾರಿಸಲು, ನಾನು ಬಾಗಿದಾಗ ನನ್ನ ತಲೆಯ ಮೇಲೆ ಸಮುದ್ರದ ನೊರೆ ಹಾರಿಬಂತು ಒಂದು ರಾಶಿ. ಅಬ್ಬ ಏನು ಗಾಳಿ ಅದು........"

ರಂಗರಾಜ—"ಆಗ ನಾನು ನೊರೆ ಬಾಸಿಂಗ, ನೊರೆ ಬಾಸಿಂಗ, ಫೇನೇರ್ ಮಕೂಟ್! ಮದುವಣಗಿತ್ತೀ, ಯಾರು ನಿನ್ನ ಗಂಡ, ಎಂದೆ ಆಗ ನೀನು........"

ಲೀಲಾ—"ನಾನು ಆಗ ಪಠಾರನೆ ಹೊಡೆದುಬಿಟ್ಟೆ ಎಡ ಗೆನ್ನೆಗೆ. ಆಗ ನೀನೋ, ಅಯ್ಯೋ ಕ್ಷಮಿಸಿ, ನೀವು ನಾಚಿಕೆಯಿಲ್ಲದವರು ಇನ್ನೊಂದು ಕೆನ್ನೆಗೂ ಹೊಡಿ ಎಂದಿರಿ. ನಾನು ಮೂಕಿಯಾಗಿ ನಿಂತೆ, ಲಜ್ಜೆ ಆವರಿಸಿತು ಮುಖಕ್ಕೆಲ್ಲ. ಮೈ ಜುಂಮ್ಮೆಂದಿತು........"

ರಂಗರಾಜ—"ಆಗ ತಪ್ಪೊಪ್ಪಿಕೊಂಡು ಕಪ್ಪವೊಪ್ಪಿಸುವ ಮೊದಲು ಗಂಡ ಎಂದೆ ಕ್ಷಮಿಸು-ವರ-ಯಾರು-ಹೇ ವಧುವೇ! ಎಂದೆ. ಆಗ ನೀನು ಬೆರಳು ನೀಡಿದೆ. ಸೂರ್ಯನ ಕಡೆಗೆ ನಾನು ತಿರುಗಿದಾಗ, ನೀನು ನನ್ನ ಕಾಲಬಳಿ ಬಾಗಿ ತಲೆಯಿಟ್ಟಿದ್ದೆ. ನಾನು ಏ ಚಿತ್ರಾಂಗಿ ಎಂದು ನಿನ್ನ ಎತ್ತಿ ತಬ್ಬಿಕೊಂಡೆ. ಅಲ್ಲವೆ? ಆದರೆ ಮುಖ ಮುಟ್ಟಿಸಲಿಲ್ಲ."

ಲೀಲಾ—"ಹೌದಿರಬೇಕು. ಯಾತಕ್ಕೋ ದೋಣಿಯಲ್ಲಿ ಕೂತು ಹೋದವರು ನಾವಿಬ್ಬರು ಗಂಡು ಹೆಣ್ಣಾಗಿಯೇ ಹಿಂತಿರುಗುತ್ತೇವೆಂದು ತಾಯಿಗೆ ಮಾತುಕೊಟ್ಟವರು, ಸತ್ಯಾಗ್ರಹದ ಬಿಡಾರದಲ್ಲಿ ಅಂದು, ಆ ಕುಮಠಾದ ಬಳಿ ಒಂದೇ ಲಾಠಿಗಾಗಿ ಇಬ್ಬರೂ ಹೊಡೆದಾಡಿದವರು. ಅಂದು ಹಾಗೆ, ಇಂದು ಹೀಗೆ ಆಗುತ್ತೇವೆಂದು ಊಹಿಸಿದ್ದವರಾರು? ಅಂತು ಅರಿಯದ ಹೆಣ್ಣನ್ನ ಏಕಾಂತ ಪ್ರದೇಶಕ್ಕೆ ಕರೆದೊಯ್ದು ಕಾಮುಕಿಯನ್ನಾಗಿ ಮಾಡಿಬಿಟ್ಟೆ........"

ರಂಗರಾಜ—"ಅರಿಯದ ಬ್ರಹ್ಮಚಾರಿಯನ್ನು ಅಂಥಾ ಏಕಾಂತ ಪ್ರದೇಶದಲ್ಲಿ ಕೆಣಕಿ ಕೆಡಸಿ ಕೈಲಾಗದ ಸಾಹಿತಿಯನ್ನಾಗಿ ಮಾಡಿಬಿಟ್ಟೆ ........"

ಲೀಲಾ—"ಆದರೆ, ನೆನಪು ಮಾಡಿಕೊಳ್ಳಿ—ನಾನು ಏನೆಂದೆನೆಂದು ಆ ದಿನ! ಶ್ರೀ ಗಾಂಧೀ ದಂಪತಿಗಳಿಗೆ ನಿಮ್ಮ ಬೊಗಸೆಯಿಂದ ಋಷಿ ತರ್ಪಣ ಕೊಡಿಸಲಿಲ್ಲವೆ? ಆ ಗುಹೆಯಲ್ಲಿ ಆ ದಿನವೆಲ್ಲ ಉಪವಾಸ ವ್ರತದಲ್ಲಿದ್ದು, ಆ ರಾತ್ರಿ, ಅದೊಂದು ಹಳೆಯ ಖಡ್ಗವಿತ್ತಲ್ಲವೆ, ಅದರ ಮೇಲೆ ಒಂದು ಕಡೆ ಗಾಂಧೀಜೀ, ಇನ್ನೊಂದು ಕಡೆ ಕಸ್ತೂರಿ ಬಾ ಎಂದು ಬಣ್ಣದ ಕಲ್ಲಲ್ಲಿ ಬರೆದು ನಡುವೆ ಇಟ್ಟು ಪೂಜೆಮಾಡಿ ಮಲಗಿದ್ದೆ ವಲ್ಲವೆ......."

ರಂಗರಾಜ—"ಅದು ಅಸಿಧಾರಾವ್ರತ. ಗಾಂಧರ್ವ ವಿವಾಹದ ಆ ಶುಭರಾತ್ರಿ! ಆ ರಾತ್ರಿ ಅದೇನು ನಿದ್ದೆ! ಏನೋ ಒಂದು ಮುಂಜಾವದ ಮಧುರ ಕನಸಾಗಿತ್ತು. ದೇವಿ ಭಾರತಿಯೇ ಹರಸುತ್ತ ನಿಂತಿದ್ದಳು. ಬೆಳಿಗ್ಗೆ ನಿಮ್ಮ ತಾಯಿ ತಂದುಕೊಟ್ಟ ತಿಂಡಿಯೇ ಪಾರಣೆಗಾಯ್ತು. ಅವರು ಅದು ಹೇಗೋ, ಯಾವ ದಾರಿಯಿಂದಲೋ ಅಲ್ಲಿಗೆ ಬಂದು ನಮ್ಮ ಅವಸ್ಥೆಯನ್ನು ಕಂಡು........"

ಲೀಲಾ—"ಸುವ್ಯವಸ್ಥೆಯನ್ನು ಕಂಡು ಸಂತೋಷಪಟ್ಟರು. ಆ ಖಡ್ಗವನ್ನು ಮನೆಯಲ್ಲಿ ಪೂಜೆಗಿಟ್ಟರು. ಅನಂತರ ಯಾರದೋ ಕರೆ ಬಂದು ನೀವು ಹೊರಟುಹೋದವರು ಒಂದು ವರ್ಷದ ನಂತರ ಹಿಂತಿರುಗಿ ಬಂದಿರಿ."

ರಂಗರಾಜ—"ಹೌದು, ಎಲ್ಲೆಲ್ಲೋ ತಿರುಗಿಕೊಂಡು ಹೋಗಿ ಪುನಹಾ ನಿಮ್ಮಲ್ಲಿಗೆ ಬಂದೆ. ನಿಮ್ಮ ತಾಯಿ ಹಂಬಲಿಸಿ ಕೇಳಿದರು......."

ಲೀಲಾ—ಏನು ಕೇಳಿದರೆಂದರೆ ನನಗೆ ನೀವು ಹೇಳಲಿಲ್ಲವಲ್ಲ. ಆದರೆ ಮುಂದೆ ನಡೆದ ಶುಭವೆಲ್ಲ ಆ ಮಾತಿನ ಫಲವೆಂದು ಅರಿವಾಯಿತು."

ರಂಗರಾಜ—"ಆ ಅರಿವಿನ ಇರವೇ ಇದು. ನಿಮ್ಮ ತಾಯಿ ಕೇಳಿದ ಪ್ರಶ್ನೆಗೆ ನಾನು ಒಂದೇ ಮಾತಿನ ಉತ್ತರ ಕೊಟ್ಟೆ. ನನಗೆ ನಿನ್ನ ಹೊರತು ಇನ್ನಾವ ವಿಷಯವೂ ಬೇಕಾಗಿರಲಿಲ್ಲ. ನನಗೆ ಯಾವ ಸಂಶಯವೂ ಇರಲಿಲ್ಲ. ದಂಡೀಯಾತ್ರೆಯೆಂಬ ಸಂಚಾರೀ ತಕ್ಷಶಿಲೆಯ ಕಲಾನಿಲಯದಲ್ಲಿ ಶಿಕ್ಷಿತರಾದವರು ಅತ್ಯುತ್ತಮರು. ಪರುಸಮಣಿ ತಾಕಿದ ಲೋಹದಂಥವರು. ಅವರು ನಿಜ ಭಾರತೀಯರು. ಅಷ್ಟು ಸಾಕು ಎಂದು ಒಪ್ಪಿ ವಿವಾಹವಾದೆ."

ಲೀಲಾ—"ವಿವಾಹವಾದಿರಿ! ಅಲ್ಲಿಗೆ ನಮ್ಮ ಕಥೆ ಮುಗಿಯಿತೇನು?

ರಂಗರಾಜ—"ಅಲ್ಲಿಗೆ ಕಥೆ ಮುಗಿಯಲಿಲ್ಲ ಆಗ ಕಿಡಿಯಿಟ್ಟ ಗೃಹ್ಯಾಗ್ನಿ ಈಗ ಇನ್ನೂ ಉರಿಯುತ್ತಲಿದೆ. ಆಗ ಉಗಮವಾದ ಪ್ರೇಮ ಪಾವನಿಯು ಈಗ ಇನ್ನೂ ಹರಿಯುತ್ತಲಿದೆ. ಆಗ ಕುಡಿಯಿಟ್ಟ ವಂಶ ವೃಕ್ಷವು ಈಗಲಿನ್ನೂ ಹಬ್ಬಿ ಹರಡಲಿದೆ."

ಲೀಲಾ—"ಸಾಕು ಸಾಕು, ಮತ್ತದನ್ನೇ ಕಥೆಯಾಗಿ ಬರೆದುಗಿರದೀರಿ. ನಿಮಗೆ ಬೇಕಾದರೆ ಬೇರೆ ಸಂದರ್ಭಗಳಿವೆ. ಅಬೆಲಾರ್ಡ್ ಹೆಲ್ವಾಸ್ ಕಥೆ ಆ ಫ್ರೆಂಚರದು, ಬಹಳ ಸ್ವಾರಸ್ಯವಾಗಿದೆಯಲ್ಲವೇ?"

ರಂಗರಾಜ—"ಆತ ಸನ್ಯಾಸಿಯಾದುದೂ, ಈಕೆ ಹಂಬಲಿಸಿದುದೂ-ಅದೇಕೋ ಮನಸ್ಸಿಗೆ ಹಿಡಿಸುವುದಿಲ್ಲ. ಅದಕ್ಕಿಂತ ಮಿಸ್. ಲೀ ಅಥವಾ ಮಿಸ್. ಲೂ ಎಂಬ ಚೀನೀ ಕಥೆಗಳು ಬಹು ಸ್ವಾರಸ್ಯವಾಗಿವೆ. ಪ್ರೇಮ ಪ್ರೇಮಿಕೆಯರ ಪರಸ್ಪರ ಭಾವನೆಗಳಿಗೆ........"

ಲೀಲಾ—"ಶಿಲಂಬು ಕಥೆ ಬರೆಯಬಹುದು. ಅದರಲ್ಲಿ ಪಾಪ, ಆ ಸತೀಮಣಿ ಎಷ್ಟು ಬಗೆಯಾಗಿ ತನ್ನ ಸುಖ, ಶಾಂತಿ, ಸೌಭಾಗ್ಯಗಳನ್ನೆಲ್ಲ ಆಹುತಿ ಕೊಡುತ್ತಾಳೆ ಗೊತ್ತೊ?"

ರಂಗರಾಜ—"ಅದಕ್ಕಿಂತ ಜಪಾನೀ ಓಶೀಚೀ ಕಥೆ ಬಹು ಚಂದ. ಅಲ್ಲಿ ಓಶೀಚೀ ತನ್ನ ಸನ್ಯಾಸೀ ಪ್ರಿಯತಮನಿಗಾಗಿ ಊರಿಗೇ ಬೆಂಕಿ ಕೊಟ್ಟು ತನ್ನ ದೇಹವನ್ನೂ ಅರ್ಪಿಸಿಬಿಡುತ್ತಾಳೆ. ಅಥವಾ ಮಲುಹಣಿಯ ಕಾಹಿನಿಯೂ........"

ಲೀಲಾ—ಅದಾವುದಾದರೂ ಬರೆದು ನಿಮ್ಮ ಗೆಳೆಯ ಕಪಿಲಾಪತಿಗೆ ಕಳಿಸಿಕೊಡಿ ಪಾಪ, ದೀಪಾವಳೀ ಉಡುಗರೆಯಾಗಿರಲಿ."

ರಂಗರಾಜನಿಗೆ ಅದಾವುದೂ ಸರಿಬರಲಿಲ್ಲ. ಕಾರಣವೇನೆಂದರೆ ಅವೆಲ್ಲ ಸಂದರ್ಭಗಳಲ್ಲಿ ಜನಿಸಿದ ಪ್ರೇಮ ವಾಹಿನಿಯು ಯಾವ ಸಾಗರಕ್ಕೂ ಹರಿಯದೆ ನಡುವೆ ಸಂಸಾರದುಸುಬಿನಲ್ಲಿ ಇಂಗಿಹೋದವು. ಅವು ಚಿರ ವಾಹಿನಿಗಳಲ್ಲ. ಆದುದರಿಂದ ಆತ ಅದೇನೋ ಬೇರೆ ಕಥೆ ಬರೆದುಬಿಟ್ಟ. ಆಕೆಗೆ ಆತ ಬರೆದುದೇನೆಂದು ಗೋತ್ತಾಯಿತು. ಆಕೆಗೆ ಅದು ಗೋಚರ ವಾಗಿದೆಯೆಂದು ಆತನಿಗೆ ನಿರ್ಧರವಾಯಿತು. ಈತ ನಿರ್ಧಾರಮಾಡಿ ಬರೆದುದನ್ನರಿತ ಆಕೆಯೂ ಹಿಂದಿಯಲ್ಲಿ ತನ್ನ ಸೇಡು ತೀರಿಸಿಕೊಂಡಳು. ಆ ಮಾಸಾಂತ್ಯದಲ್ಲಿ ಉಪ್ಪಿನ ಸತ್ಯಾಗ್ರಹದ ಒಂದೇ ಸಂದರ್ಭದ ಎರಡು ಕಾಹಿನಿಗಳು ಎರಡು ಪತ್ರಿಕೆಗಳಲ್ಲಿ ಎರಡು ಭಾಷೆಗಳಲ್ಲಿ ಪ್ರಕಟವಾದವು. ಭಾರತ ಸಾಹಿತ್ಯ ಸಮಿತಿಯವರು ಅಂಬರ ಪತ್ರಿಕೆಯಲ್ಲಿನ ಶ್ರೀ ವೀಚಿಯವರ ಸಾಹಿತ್ಯ ಕೃತಿಗೆ ಬಂಗಾರದ ಮುದ್ರಿಕೆಯನ್ನು ಕಳುಹಿಸಿಕೊಟ್ಟರು. ಕನ್ನಡ ಪತ್ರಿಕೆಯಲ್ಲಿನ ಕೃತಿಯು ಅಂಬರದ ಅನುವಾದವಾದರೂ ಸಾಧುವಾದುದೆಂದು ರಜತಪಾತ್ರೆಯನ್ನು ದಯಪಾಲಿಸಿದರು.

ಮೂರನೇ ತಿಂಗಳ ಮೊದಲನೇ ವಾರ ರಂಗರಾಜನ ಬೆರಳಲ್ಲಿ ಸಾಹಿತ್ಯ ಮುದ್ರಿಕೆಯಿತ್ತು; ಮತ್ತು ಲೀಲಾವತಿಯ ಕೈಲಿ ಹಾಲು ತುಂಬಿದ ರಜತ ಪಾತ್ರೆಯಿತ್ತು. ಒಬ್ಬರ ಮುಖ ಮತ್ತೊಬ್ಬರು ನೋಡಿ ನಗುತ್ತಿದ್ದರು—ಅವರಿಬ್ಬರೂ ಆ ಪ್ರೇಮಪಕ್ಷಿಗಳು, ಆ ಪ್ರೇಮದ ಗೂಡಿನಲ್ಲಿ!

ಇದೇ ಲೇಖಕರ ನಮ್ಮ ಮುಂದಿನ ಪ್ರಕಟನೆ :—

"ದಿನಾರಿ"

ಸುಮಾರು ೧೧೦ ಪುಟಗಳು

**ಬೆಲೆ : ೧—೪—೦**

**ಸತ್ಯಶೋಧನ ಪ್ರಕಟನ ಮಂದಿರ**

ಕೋಟೆ :: ಬೆಂಗಳೂರು ನಗರ